# ಯಾರ ಸಹಾಯ



ಶ್ರೀ ರಾಮಕೃಷ್ಣ

1 [illegible]9೪

ಪ್ರಕಾಶಕರು :

ಸಿ. ಶಂಕರ್ ಮತ್ತು ಸಹೋದರರು

ತುಮಕೂರು

# ಬಿನ್ನಹ

ಭಾಷಾಸೇವೆಮಾಡಬೇಕೆಂಬ ಮಹತ್ವಾಕಾಂಕ್ಷೆ ಅನೇಕರ ಮನಸ್ಸನ್ನಾವರಿಸಿ ಅದರ ಪರಿಣಾಮವಾಗಿ ಸಣ್ಣಕತೆಗಳು, ಕಾದಂಬರಿಗಳು, ಜೀವನ ಚರಿತ್ರೆಗಳು ಶಾಸ್ತ್ರಗ್ರಂಥಗಳು ಬಹುಸಂಖ್ಯೆಯಲ್ಲಿ ಪ್ರಕಟಿಸಲ್ಪಡುತ್ತಿವೆ. ಅವುಗಳ ಪಂಕ್ತಿಗೆ ಸೇರಲು ಈ ಕತೆಗೆ ಯೋಗ್ಯತೆ ಇದೆಯೇ ಎಂಬ ಅನುಮಾನಬಂದು ಹಸ್ತಪ್ರತಿ ಬಹಳ ದಿನಗಳು ಹಳೆಯಕಾಗದದ ಗಂಟನ್ನು ಸೇರಿತ್ತು. ಪ್ರಾಣಪಕ್ಷಿ ಹಾರಿಹೋಗಿದೆಯೆಂಬುದನ್ನು ದೃಢಪಡಿಸಿಕೊಳ್ಳಲು ವೈದ್ಯರಿಗೆ ತೋರಿಸುವಂತೆ ಇದರ ವಿಚಾರದಲ್ಲಿ ತಿಳಿದವರ ಸ್ಪಷ್ಟ ಅಭಿಪ್ರಾಯವನ್ನು ಪಡೆಯಬೇಕೆಂದು, ಅವರ ಮಿತ್ರವರ್ಗದಲ್ಲಿ ನನ್ನನ್ನೂ ಒಬ್ಬನಾಗಿ ಪರಿಗಣಿಸಿ ಗೌರವಿಸುತ್ತಿರುವ ದಾವಣಗೆರೆ ಇಂಟರ್ ಮಿಡಿಯೇಟ್ ಕಾಲೇಜಿನ ಸೂಪರಿಂಟೆಂಡೆಂಟರಾಗಿರುವ ಶ್ರೀ ತೀ. ನಂ. ಶ್ರೀಕಂಠಯ್ಯ, ಎಂ.ಎ., ಇವರಲ್ಲಿ ವಿಜ್ಞಾಪಿಸಿಕೊಂಡೆ. ಅವರ ಸರಳ ಸ್ವಭಾವಕ್ಕನುಸಾರವಾಗಿ ಹಸ್ತಪ್ರತಿಯನ್ನು ಅವಲೋಕಿಸಿ ತಪ್ಪುಗಳನ್ನು ತಿದ್ದಿ ಅಮೂಲ್ಯ ಸಲಹೆಗಳನ್ನು ಕೊಟ್ಟು ಪುಸ್ತಕರೂಪದಲ್ಲಿ ಪ್ರಕಟಿಸುವುದರಿಂದ ಕಾಗದವನ್ನು ವೃಥಾ ವ್ಯಯಮಾಡಿದಂತಾಗುವುದಿಲ್ಲವೆಂದು ಅಭಿಪ್ರಾಯಪಟ್ಟರು. ಶ್ರೀಯುತರುಗಳಾದ ಶಂಕರ ಸಹೋದರರು ಪ್ರಕಟಿಸುವ ಭಾರವನ್ನು ವಹಿಸಲು ಮುಂದೆ ಬಂದರು. ಓದುಗರ ಅಭಿಪ್ರಾಯ ಏನೇ ಇರಲಿ ನಾನು ಇವರಿಗೆ ಚಿರಋಣಿ.

ತುಮಕೂರಿನ ನ್ಯಾಷನಲ್ ಪ್ರೆಸ್ ಶ್ರೀ ಟಿ. ಪಿ. ಕೃಷ್ಣಪ್ಪನವರು ಅಲ್ಪಾವಕಾಶದಲ್ಲಿ ಪುಸ್ತಕವನ್ನು ಮುದ್ರಿಸಿಕೊಟ್ಟದ್ದಕ್ಕೆ ನಾನು ಕೃತಜ್ಞನಾಗಿದ್ದೇನೆ. ಇಲ್ಲಿ ಅಲ್ಲಿ ಮುದ್ರಣದ ಅಚಾತುರ್ಯಗಳೇನಾದರೂ ಕಂಡುಬಂದಲ್ಲಿ ಮುದ್ರಣಕಾರರಿಗೆ ಸಾಕಷ್ಟು ಅವಕಾಶವನ್ನು ಕೊಡದ ನಾನೇ ಅವುಗಳಿಗೆ ಕಾರಣ.

೧೫—೮—೪೮

**ರಾಮಕೃಷ್ಣ**

# ಯಾರ ಸಹಾಯ

---

೧

ಸೂರ್ಯನು ಅಸ್ತಮಿಸಿ ಸುಮಾರು ಒಂದೆರಡು ಗಳಿಗೆಗಳಾಗಿರಬಹುದು. ಚಂದ್ರಗಿರಿಯ ತಪ್ಪಲಿನ ದೊಡ್ಡ ಪುಷ್ಕರಣಿಯ ಜನಸಂದಣಿ ಕ್ರಮೇಣ ಕಡಿಮೆಯಾಗುತ್ತ ಬಂದಿತು. ಬಟ್ಟೆಗಳನ್ನು ಒಗೆಯಲು ಬಂದಿದ್ದವರು ಒಗೆದ ಬಟ್ಟೆಗಳನ್ನು ಮಡಿಸಿ ನೀರು ಚಿಮುಕಿಸಿ ತಟ್ಟುವ ಶಬ್ದವೂ ಒಬ್ಬರನ್ನೊಬ್ಬರು ಕೂಗುವ ಶಬ್ದವೂ ನಿಂತುಹೋದುವು. ಬಣ್ಣಬಣ್ಣಗಳ ಆಕಾಶವನ್ನು ಪ್ರತಿಬಿಂಬಿಸುತ್ತಿದ್ದ ಪುಷ್ಕರಣಿಯ ಸ್ವಚ್ಛಜಲವು ಕಪ್ಪಾಗಿಕಾಣಲು ಪ್ರಾರಂಭಿಸಿದ್ದಿತು. ಗಗನತಲದಲ್ಲಿ ಮಿನುಗುಟ್ಟಲು ತೊಡಗಿದ ನಕ್ಷತ್ರಗಳ ಪ್ರತಿಬಿಂಬಗಳು ಆ ಜಲರಾಶಿಯಲ್ಲಿ ಹೊಸದಾಗಿ ಅರಳಿದ ಮಲ್ಲಿಗೆ ಹೂಗಳನ್ನು ತೇಲಬಿಟ್ಟಿರುವರೋ ಎಂಬ ಭ್ರಾಂತಿಯನ್ನುಂಟುಮಾಡುತ್ತಿದ್ದುವು. ಕೆಲವು ಮಂದಿ ದ್ವಿಜರು ಮಾತ್ರ ಸಂಧ್ಯಾವಿಧಿಯಲ್ಲಿ ಮಗ್ನರಾಗಿ ಇಲ್ಲೊಬ್ಬರು ಅಲ್ಲೊಬ್ಬರು ಕುಳಿತಿದ್ದರು. ಕ್ರಮೇಣ ಅವರ ಸಂಖ್ಯೆಯೂ ಕಡಿಮೆಯಾಗುತ್ತಾಹೋಗಿ ಕೊನೆಗೆ ಇಬ್ಬರು ಮಾತ್ರ ಉಳಿದರು. ಅವರಲ್ಲಿಯೂ ಒಬ್ಬರು ಸಂಧ್ಯಾವಿಧಿಯನ್ನು ಮುಗಿಸಿ ಮೆಟ್ಟಿಲುಗಳನ್ನು ಹತ್ತಿಬಂದು ತಮ್ಮ ಬಟ್ಟೆಗಳನ್ನು ಹಾಕಿಕೊಂಡು ಇನ್ನೊಬ್ಬರ ಬರುವಿಕೆಯನ್ನು ಕಾಯುತ್ತಾಕುಳಿತರು. ಅವರ ವಯಸ್ಸು ಸುಮಾರು ಇಪ್ಪತ್ತೈದು ಇರಬಹುದು. ಹಾಕಿದ್ದ ಅಂಗಿ ರುಮಾಲುಗಳು ನೌಕರ ವರ್ಗದವರೆಂದು ಘೋಷಿಸುತ್ತಿದ್ದುವು.

ಸ್ವಲ್ಪ ಹೊತ್ತಾದಮೇಲೆ ಇನ್ನೊಬ್ಬರೂ ಸಂಧ್ಯಾಕರ್ಮವನ್ನು ಮುಗಿಸಿಕೊಂಡು ಮೇಲೆ ಬಂದರು. ಆಜಾನುಬಾಹುವಾದ ವ್ಯಕ್ತಿ. ಉಟ್ಟಿದ್ದುದು ಮೇಲುಕೋಟೆಯ ಒಬ್ಬಟ್ಟಂಚಿನ ಪಂಚೆ. ಹೊದೆದಿದ್ದುದು ರೇಷ್ಮೆಯಂಚಿನ

ಘೋತ್ರ. ಅದರಮೇಲೊಂದು ಕಾಶ್ಮೀರದ ಶಾಲು. ಮುಖದ ಮೇಲೆ ಆ ಮುಸುಕು ಬೆಳಕಿನಲ್ಲಿ ಎದ್ದುಕಾಣುತ್ತಿರುವ ವಿಭೂತಿಯ ಪಟ್ಟೆಗಳು, ಹೊಳೆಯುತ್ತಿರುವ ಕಣ್ಣುಗಳು. ಪ್ರಸನ್ನತೆಯನ್ನೂ ವಿಚಾರಪೂರತೆಯನ್ನೂ ಸೂಚಿಸುವ ಗಂಭೀರವಾದ ಮುಖ. ವಯಸ್ಸು ಐವತ್ತಕ್ಕೆ ಮೀರಿರಲಾರದೆಂದು ಕಾಣುತ್ತಿತ್ತು. ಇವರು ಹತ್ತಿರ ಬರುತ್ತಲೇ ಕುಳಿತಿದ್ದವರು ಎದ್ದು "ಗುರುಗಳಿಗೆ ನಮಸ್ಕಾರ" ಎಂದರು.

"ಒಳ್ಳೆಯದು, ಯಾರು ಕಂಠಿಯೇ?"

"ಹೌದು ಗುರುಗಳೇ"

"ಏನಪ್ಪಾ, ಬಹಳ ದಿವಸಕ್ಕೆ ಪುಷ್ಕರಣಿಯಲ್ಲಿ ತಿರುಗಿ ಸಂಧ್ಯಾವಂದನೆ ಮಾಡಬೇಕೆಂಬ ಅಪೇಕ್ಷೆ ಹುಟ್ಟಿದಂತೆ ಕಾಣುತ್ತದೆ".

ಶ್ರೀಕಂಠಯ್ಯನಿಗೆ ಮುಖ ಸ್ವಲ್ಪ ಪೆಚ್ಚಾಯಿತು. ಆತನು ಕೃಷ್ಣಭಟ್ಟರಲ್ಲಿ ಶಿಷ್ಯನಾಗಿದ್ದಷ್ಟು ದಿನಗಳೂ ಗುರುಗಳ ಸಂಗಡ ಪುಷ್ಕರಣಿಗೆ ಬಂದು ಸಂಧ್ಯಾದೇವಿಗೆ ಅರ್ಘ್ಯವನ್ನರ್ಪಿಸದ ದಿನವಿರಲಿಲ್ಲ. ಶಿಷ್ಯವೃತ್ತಿಯನ್ನು ಬಿಟ್ಟು ಅರಮನೆಯಲ್ಲಿ ಸೇವಾವೃತ್ತಿಯನ್ನವಲಂಬಿಸಿದ ಮೇಲೆ ಆ ಪದ್ಧತಿಯು ನಿಂತುಹೋಗಿದ್ದಿತು. ಮಾತಾಡಲು ತೋಚದೆ ತಲೆತಗ್ಗಿಸಿಕೊಂಡು ನಿಂತರು.

"ಯಾಕೆ ಕಂಠೀ, ನಾನು ಸುಮ್ಮನೆ ಅಂದೆ. ಮನಸ್ಸಿಗೆ ಏನೂ ತಿಳಿದುಕೊಳ್ಳಬೇಡ. ಸಂಧ್ಯಾಸಮಯದಲ್ಲಿ ಪ್ರಕೃತಿಮಾತೆಯು ಒಡಲಂತಿರುವ ಈ ಪುಷ್ಕರಣಿಯಲ್ಲಿ ಸಂಧ್ಯಾಕರ್ಮವನ್ನೆಸಗುವ ಅವಕಾಶವನ್ನು ಯಾರು ತಾನೇ ಪ್ರಬಲಕಾರಣಗಳಿಲ್ಲದಹೊರತು ಕಳೆದುಕೊಳ್ಳುವರು. ಬಹುಶಃ ಕಛೇರಿಯ ಕೆಲಸ ಹೊತ್ತಿಗೆ ಸರಿಯಾಗಿ ಮುಗಿಯುವುದಿಲ್ಲವೇನೋ. ನಿನ್ನ ಕಷ್ಟ ನನಗೇನು ಗೊತ್ತಾಗುದಿಲ್ಲವೆ. ಈದಿನ ಪುರಸತ್ತು ಸಿಕ್ಕಿತೇ?".

"ತಮ್ಮ ದರ್ಶನ ಈ ಹೊತ್ತಿನಲ್ಲಿ, ಇಲ್ಲಿ ಖಂಡಿತ ಆಗುವುದೆಂಬ ಭರವಸೆಯಿಂದ ಪುರಸತ್ತು ಮಾಡಿಕೊಂಡು ಇಲ್ಲಿಗೆ ಬಂದೆ. ತಮ್ಮಲ್ಲಿ ಒಂದು ವಿಚಾರ ವಿಜ್ಞಾಪಿಸಿಕೊಳ್ಳುವುದಿದೆ. ಅಪ್ಪಣೆ ಆದರೆ ಹೇಳುತ್ತೇನೆ".

"ನನ್ನಿಂದ ಆಗಬೇಕಾದ ಕೆಲಸವೇನಾದರೂ ಇದ್ದರೆ ಅಗತ್ಯವಾಗಿ ಹೇಳು. ನಿನಗೆ ಸಹಾಯಮಾಡಲು ನನ್ನ ಕೈಲಾದ್ದನ್ನೆಲ್ಲಾ ಮಾಡುತ್ತೇನೆ. ಅದಕ್ಕೇಕೆ ಇಷ್ಟು ಸಂಕೋಚ".

ಮಾತನಾಡುತ್ತಾ ಕೃಷ್ಣಭಟ್ಟರು ಹೊರಟರು. ಶ್ರೀಕಂಠಯ್ಯನವರೂ ಹೊರಟರು. ಗುರುಗಳು ಸ್ವಲ್ಪ ಮುಂದೆ, ಶಿಷ್ಯ ಎರಡು ಹೆಜ್ಜೆ ಹಿಂದೆ. ಸ್ವಲ್ಪ ಹೊತ್ತಾದರೂ ಶ್ರೀಕಂಠಯ್ಯನವರು ಮಾತನಾಡದಿರಲು ಭಟ್ಟರು "ಯಾಕೆ ಕಂಠೀ ಸಂಕೋಚ, ಏನು ವಿಚಾರ" ಎಂದರು.

"ಸಂಕೋಚವಲ್ಲ, ಸ್ವಲ್ಪ ಹೆದರಿಕೆ. ಹೇಗೆ ಹೇಳುವುದು ಎಂದು ಯೋಚಿಸುತ್ತಿದ್ದೇನೆ". ಭಟ್ಟರು ಮುಗುಳ್ನಗೆ ನಗುತ್ತಾ "ಏನಯ್ಯಾ ನನ್ನ ಶಿಕ್ಷೆ ನಿನಗೆ ಅಷ್ಟು ಹೆದರಿಕೆ ಹುಟ್ಟಿಸಿದೆಯೇ. ಇಷ್ಟುಹೊತ್ತಿಗೆ ಹೆಂಗಸರ ಕೈಲಿ ಹಾಡು ಹೇಳಿಸಬಹುದಾಗಿತ್ತು. ಏನು ಹೇಳು" ಅಂದರು.

"ಏನೂ ಇಲ್ಲ, ಪ್ರಭುಗಳು ಸಮ್ಮುಖದ ಪ್ರಮುಖ ವಿದ್ವಾಂಸರಲ್ಲಿ ಒಂದು ಕನ್ನಡ ಗ್ರಂಥ ಸ್ಪರ್ಧೆಯನ್ನೇರ್ಪಡಿಸುವರೆಂಗೂ, ಅತ್ಯುತ್ತಮ ಗ್ರಂಥವನ್ನು ಬರೆದವರಿಗೆ ವಿದ್ವತ್ಸಭೆಯಲ್ಲಿ ಪ್ರಶಸ್ತಿಯನ್ನೂ ಬಹುಮಾನವ ನ್ನೂ ಕೊಡುವರೆಂಗೂ ಈ ಸಂಗತಿಯನ್ನೊಳಕೊಂಡ ಪತ್ರಗಳು ಆಸ್ಥಾನ ದಿಂದ ಒಂದೆರಡು ದಿನಗಳಲ್ಲಿ ಪ್ರಮುಖ ವಿದ್ವಾಂಸರುಗಳಿಗೆ ಬರುವುವೆಂದೂ ಕೇಳಿದೆನು".

"ಯಾರು ಯಾರಿಗೆ ಪತ್ರಗಳು ಹೋಗುವುವು?".

"ಎಲ್ಲರ ಹೆಸರೂ ನನಗೆ ಗೊತ್ತಿಲ್ಲ. ತಮಗೂ ಸೋಮಶರ್ಮರಿಗೂ ಹೋಗುವುದೆಂದು ಬಲ್ಲೆ".

"ಗ್ರಂಥವು ಯಾವಾಗ ಮಹಾರಾಜರಿಗೆ ಸೇರಬೇಕು"?

"ಇನ್ನು ಹದಿನೈದು ದಿನಗಳೊಳಗೆ. ಮಹಾಸ್ವಾಮಿಗಳವರು ಉದ್ದೇಶ ಪೂರ್ವಕವಾಗಿಯೇ ಕಾಲಾವಕಾಶವನ್ನು ಕಡಿಮೆಮಾಡಿದ್ದಾರೆಂದು ಕೇಳಿದೆನು"

"ಹಾಗೇನು, ನಿನ್ನ ಗುರುಭಕ್ತಿಯಿಂದ ಉಳಿದವರಿಗಿಂತ ಎರಡು ದಿವಸಗಳ ಹೆಚ್ಚಿನ ಅವಕಾಶ ನನಗೆ ಸಿಕ್ಕಿದಂತಾಯಿತು. ಇದನ್ನು ತಿಳಿಸಲು ಇಲ್ಲಿಗೆ ಬಂದೆಯಾ"?

"ಅದೂ ಒಂದು ಉದ್ದೇಶ. ತಾವು ಗ್ರಂಥರಚನೆಮಾಡಿ ಒಪ್ಪಿಸುತ್ತೀರಾ"?

"ಏಕೆ ಹೀಗೆ ಕೇಳುವೆ? ಆಸ್ಥಾನದ ಪತ್ರ ಆಜ್ಞೆಯಲ್ಲವೇ"?

"ಕ್ಷಮಿಸಬೇಕು. ಅರಮನೆಯ ಕಛೇರಿಯಲ್ಲಿ ಏನೋ ಒಡಕು ಮಾತು ಕೇಳಿದೆ. ಆದುದರಿಂದ ಈ ರೀತಿ ತಮ್ಮನ್ನು ಪ್ರಶ್ನಿಸಬೇಕಾಯಿತು".

"ಏನು ಆ ಮಾತು"?

"ಮಹಾಸ್ವಾಮಿಗಳಿಗೆ ಸೋಮಶರ್ಮರಲ್ಲಿ ಬಹಳ ವಿಶ್ವಾಸವೆಂದೂ ಅವರೊಡನೆ ಇತರರು ಯಾರೂ ಸ್ಪರ್ಧಿಸಿದರೂ ಪ್ರಯೋಜನವಿಲ್ಲವೆಂದೂ ಸೋಮಶರ್ಮರ ಪಾಂಡಿತ್ಯಕ್ಕೆ ಯಾವ ಭಾಗದಲ್ಲೂ ಏನೂ ಕಮ್ಮಿ ಇಲ್ಲದ ತಮ್ಮ ಪಾಂಡಿತ್ಯಕ್ಕೂ ಮನ್ನಣೆ ದೊರೆಯಲಾರದೆಂದೂ, ತಮಗೂ ಈ ವಿಚಾರ ತಿಳಿದಿದ್ದು ಬಹುಶಃ ತಾವು ಸ್ಪರ್ಧೆಗೆ ಪ್ರವೇಶಿಸುವುದಿಲ್ಲವೆಂದೂ ಕೇಳಿದೆನು. ಇದರ ನಿಜಾಂಶ ತಮಗೆ ತಿಳಿದಿರಬೇಕು".

"ಬೆಂಕಿಯಿಲ್ಲದೆ ಹೊಗೆಯಿಲ್ಲ ಎಂದು ನೀನು ಕೇಳಿಲ್ಲವೇ? ಸೋಮಜ್ಞನ ಮೇಲೆ ಮಹಾರಾಜರ ಅನುಗ್ರಹ ಇರುವುದು ನಿಜ. ಅವನೂ ಅದಕ್ಕೆ ಪಾತ್ರನೇ ಹೌದು. ನಮ್ಮ ಆಸ್ಥಾನದಲ್ಲಿ ಅವನೊಂದು ಅಮೂಲ್ಯ ರತ್ನ. ಅವನ ಮೇಲೆ ಕೃಪೆತೋರುವುದರಲ್ಲಿ ತಪ್ಪೇನು"?

"ಅದರಲ್ಲಿ ತಪ್ಪಿಲ್ಲ. ಒಂದು ಒಳ್ಳೆಯ ವಸ್ತುವಿನ ಜೊತೆಯಲ್ಲಿ ಇನ್ನೊಂದು ಒಳ್ಳೆಯ ವಸ್ತುವಿದ್ದರೆ ಅದರ ಗುಣವನ್ನೂ ನಿಷ್ಪಕ್ಷಪಾತಿಗಳು ಗ್ರಹಿಸಬೇಕಲ್ಲವೇ"?

"ಕಂಠೀ, ನಿನಗೆ ಲಾಡು ಇಷ್ಟವೋ ಚಿರೋಟಿ ಇಷ್ಟವೋ"?

"ಲಾಡು".

"ಹಬ್ಬದ ದಿನದಲ್ಲಿ ನಿಮ್ಮಮ್ಮ ಲಾಡು ಮಾಡಲೇ ಚಿರೋಟಿ ಮಾಡಲೇ ಎಂದು ಕೇಳಿದರೆ ಏನು ಹೇಳುತ್ತೀ"?

"ಲಾಡು ಮಾಡು ಎಂದು".

"ಏಕೆ ಚಿರೋಟಿಯ ರುಚಿ ಕಡಿಮೆಯೇ"?

"ಇಲ್ಲ. ನನಗೆ ಲಾಡುವಿನ ಮೇಲೆ ಪ್ರೀತಿ".

"ಇದೂ ಹಾಗೆಯೇ. ಮಹಾರಾಜರಿಗೆ ಬೇಕಾದ್ದನ್ನು ಅವರು ಆಯ್ದುಕೊಳ್ಳುತ್ತಾರೆ. ಸೋಮಣ್ಣನ ಕವಿತೆ ಮಹಾರಾಜರಿಗೆ ರುಚಿ. ನನ್ನದು ಅವರ ಮನಸ್ಸಿನ ಮೇಲೆ ಅಷ್ಟು ಪರಿಣಾಮವನ್ನುಂಟುಮಾಡಿಲ್ಲ. ಅದರಲ್ಲಿ ಅವರ ತಪ್ಪೇನು? ನಿನಗೆ ಲಾಡು ಚಿರೋಟಿ ಎರಡೂ ಸಿಕ್ಕುವಾಗ ನೀನು ಚಿರೋಟಿಯ ಕಡೆಗೆ ತಿರುಗಿಕೂಡ ನೋಡುವುದಿಲ್ಲ. ಹೌದೋ ಅಲ್ಲವೋ"?

"ಹೌದು ತಮ್ಮ ಮಾತಿಗೆ ಎದುರು ಹೇಳಲು ಶಕ್ತನಲ್ಲ. ಆದರೆ……." ಎಂದು ಏನೋ ಹೇಳಲು ಹೋಗಿ ಅಷ್ಟರಲ್ಲೇ ನಿಲ್ಲಿಸಿ "ಸ್ಪರ್ಧೆಗೆ ತಮ್ಮ ಕೃತಿಯೂ ಬರುತ್ತದೆಂದು ಅಪ್ಪಣೆಯಾಯಿತಲ್ಲವೆ ?".

"ಮಹಾರಾಜರ ಅಭಿಲಾಷೆಯನ್ನು ಆಜ್ಞೆಯೆಂದು ಶಿರಸಾವಹಿಸಿ ವಾಣಿಯು ಕೃಪೆಮಾಡುವಂತಹ ಕೃತಿಯನ್ನು ಮಹಾಸ್ವಾಮಿಗಳಿಗೆ ಸಮರ್ಪಿಸುವೆನು".

ಇಷ್ಟು ಹೊತ್ತಿಗೆ ಇಬ್ಬರೂ ಪಟ್ಟಣದ ಬಾಗಿಲಿಗೆ ಬಂದಿದ್ದರು. ಪ್ರಪಂಚದ ಅಜ್ಞಾನಾಂಧಕಾರದಲ್ಲಿ ಅಲ್ಲೊಂದು ಇಲ್ಲೊಂದು ಜ್ಞಾನಜ್ಯೋತಿಗಳು ಬೆಳಗುವಂತೆ ಬೀದಿಗಳನ್ನಾವರಿಸಿದ್ದ ಕತ್ತಲೆಯನ್ನು ಹೋಗಲಾಡಿಸಲು ಹೊತ್ತಿಸಿದ್ದ ದೀಪಗಳು ಇಲ್ಲೊಂದು ಅಲ್ಲೊಂದು ಮಿನುಗುಟ್ಟುತ್ತಿದ್ದುವು. ಪಟ್ಟಣವನ್ನು ಪ್ರವೇಶಿಸುತ್ತಲೇ ಗುರುಶಿಷ್ಯರಿಬ್ಬರೂ ಮಾತನಾಡುವುದನ್ನು ನಿಲ್ಲಿಸಿದರು. ಕೃಷ್ಣಭಟ್ಟರು ಮನೆಯ ಸಮೀಪಕ್ಕೆ ಬರುತ್ತಲೂ ಭಟ್ಟರು ನಿಂತುಕೊಂಡು "ಒಳಗೆ ಬಾ ಕಂಠೀ, ಊಟಮಾಡಿಕೊಂಡು ಹೋಗುವಿಯಂತೆ" ಎಂದರು.

"ಗುರುಗಳ ಮನೆಯ ಪ್ರಸಾದ ದೊರೆಯುವುದು ಒಂದು ಭಾಗ್ಯ. ಆದರೆ ನಾನು ಒಬ್ಬರನ್ನು ಈಗಲೇ ನೋಡಬೇಕಾದ ಅಗತ್ಯವಿದೆ. ಇನ್ನೊಂದು ದಿನ ಬರಲು ಅಪ್ಪಣೆ ಆಗಬೇಕು".

"ನಿನ್ನ ಕೆಲಸಕ್ಕೆ ತೊಂದರೆಮಾಡಲು ನನಗೆ ಇಷ್ಟವಿಲ್ಲ. ನಿನಗೆ ಅನುಕೂಲವಿದ್ದಹಾಗೆ ಮಾಡು".

"ನನ್ನದು ಇನ್ನೊಂದು ಪ್ರಾರ್ಥನೆಯಿದೆ".

"ಏನದು"?

"ತಾವು ಸೋಮಶರ್ಮರನ್ನು ಅಕಸ್ಮಾತ್ ಸಂಧಿಸಿದರೆ ಸ್ಪರ್ಧೆಯ ವಿಚಾರ ಪ್ರಸ್ತಾಪಿಸದಿರಬೇಕು".

"ನಾನು ಸೋಮಣ್ಣನನ್ನು ಸಂಧಿಸುವ ಸಂಭವ ತೀರ ಕಡಿಮೆ. ಅರಮನೆಯ ಕಛೇರಿಯಲ್ಲಿ ಅನೇಕ ಒಡಕುಮಾತುಗಳನ್ನು ಕೇಳಿರುವ ನೀನು ಆಸ್ಥಾನ ವಿದ್ವಾಂಸರು ಆಸ್ಥಾನದಿಂದ ಹೊರಹೊರಟ ಮೇಲೆ ಒಬ್ಬರನ್ನೊಬ್ಬರು ಮಾತನಾಡಿಸುವುದು ಅಪೂರ್ವವೆಂದು ಕೇಳಿಲ್ಲವೇ. ಮಹಾರಾಜರೂ ಕೂಡ ಸಧ್ಯದಲ್ಲೇ ದೇವರ ಸೇವೆಯ ಉದ್ದೇಶ ಶ್ರೀಕಂಠಪುರಕ್ಕೆ ಎಂಟು ಹತ್ತು ದಿನಗಳು ಹೋಗುವರು. ಆದುದರಿಂದ ನಾವು ಸಂಧಿಸುವುದು ಬಹಳ ಅಸಂಭವ. ಹಾಗೆ ಸಂಧಿಸಿದರೂ ನೀನು ಹೇಳಿರುವುದನ್ನು ಜ್ಞಾಪಕದಲ್ಲಿಟ್ಟುಕೊಂಡಿರುತ್ತೇನೆ".

"ಅಪ್ಪಣೆಯಾದರೆ ಹೋಗಿಬರುತ್ತೇನೆ. ನಮಸ್ಕಾರ".

"ಭಗವಂತನು ನಿನಗೆ ಒಳ್ಳೆಯದನ್ನು ಮಾಡಲಿ. ಹೋಗಿ ಬಾ".

ಕೃಷ್ಣಭಟ್ಟರು ತಮ್ಮ ಮನೆಯನ್ನು ಪ್ರವೇಶಿಸಿದರು. ಶ್ರೀಕಂಠಯ್ಯನವರು ಮನೆಗೆ ಹೋಗುವ ನೇರವಾದ ದಾರಿಯನ್ನು ಬಿಟ್ಟು ಬಡಜನರು ವಾಸಿಸುತ್ತಿದ್ದ ಪುರಭಾಗದ ಕಡೆಗೆ ಹೊರಟರು. ಅನುಕೂಲಸ್ಥರಲ್ಲಿರುವುದಕ್ಕಿಂತ ಬಡಜನರಲ್ಲಿ ವಿದ್ಯಾವಂತರು ಕಡಿಮೆ ಎಂಬುದನ್ನು ಸೂಚಿಸುವಂತೆ

ಈ ಭಾಗನಲ್ಲಿ ದೀಪಗಳ ಸಂಖ್ಯೆಯೂ ಬಹಳ ಕಡಮೆಯಾಗಿತ್ತು. ರಸ್ತೆಯೂ ಕಿರಿದು. ಹಳ್ಳಕೊಳ್ಳಗಳೂ ಬಹಳ. ಅಲ್ಲಲ್ಲೇ ಮೇಲೆದ್ದಿರುವ ಕಲ್ಲುಗಳು. ಜೊತೆಗೆ, ಹಗಲೆಲ್ಲಾ ದುಡಿದು ವಿಶ್ರಮಿಸಿಕೊಳ್ಳಲು ಬೇರೆಲ್ಲೂ ಜಾಗಸಿಕ್ಕದೆ ರಸ್ತೆಗಳಲ್ಲಿ ನಿದ್ರಿಸುತ್ತಿರುವ ಅಗಸರ ಕತ್ತೆಗಳು, ಪೋಲಿನಾಯಿಗಳು. ಬೆಳಕಾಗಿದ್ದ ಅಗಲವಾದ ರಸ್ತೆಗಳಿಂದ ಈ ಓಣಿಗಳಿಗೆ ಬಂದ ಶ್ರೀಕಂಠಯ್ಯನವರ ಕಣ್ಣುಗಳು ಕತ್ತಲೆಯನ್ನು ಭೇದಿಸಿ ದಾರಿಯಲ್ಲಿದ್ದ ಅಡಚಣೆಗಳನ್ನೆಲ್ಲಾ ಗುರುತಿಸಿ ಕಾಲಿಗಾಗಲಿ, ತನ್ಮೂಲಕ ಶಿರಸ್ಸಿಗಾಗಲಿ, ಅಪಾಯ ಸಂಭವಿಸದಂತೆ ನೋಡಿಕೊಳ್ಳಲು ಬಹಳ ಪ್ರಯಾಸಪಡಬೇಕಾಗಿದ್ದಿತು. ಹಾಗೂ ಹೀಗೂ ಹೆಜ್ಜೆಯಮೇಲೆ ಹೆಜ್ಜೆಯನ್ನಿಟ್ಟುಕೊಂಡು ಶ್ರೀಕಂಠಯ್ಯನವರು ಒಂದು ಸಣ್ಣ ಮನೆಯ ಬಳಿಗೆ ಬಂದು "ಸಿದ್ದಾ, ಸಿದ್ದಾ" ಎಂದು ಕೂಗಿದರು.

"ಯಾರು? ಬಂದೆ" ಎಂದು ಹೇಳುತ್ತಾ ಸಿದ್ದನು ಬಾಗಿಲನ್ನು ತೆಗೆದುಕೊಂಡು ಹೊರಗೆ ಬಂದವನೇ "ಯಾರು" ಎಂದು ಪುನಃ ಕೇಳಿದನು.

"ನಾನು ಸಿದ್ದಾ. ಗುರುತು ಗೊತ್ತಾಗಲಿಲ್ಲವೆ?".

"ಕಂಠಯ್ಯನೋರಲ್ಲವಾ. ಏನು ಬುದ್ದಿ, ಇಷ್ಟೊತ್ನಾಗ ಬಂದದ್ದು".

"ಈ ಕಡೇ ಬಂದಿದ್ದೆ. ಹಾಗೇ ನಿನ್ನನ್ನು ವಿಚಾರಿಸಿಕೊಂಡು ಹೋಗೋಣವೆಂದು ಬಂದೆ. ಎಲ್ಲಾದರೂ ಖಾಯಂ ಕೆಲಸ ಸಿಕ್ಕಿತೇನಯ್ಯ".

"ಇಲ್ಲಾ ಬುದ್ದೀ, ನಿಮ್ಮ ಪಾದ. ನೀವೇ ಎಲ್ಲಾದರೂ ಒಂದು ಚಾಕರಿ ಮಾಡ್ಸಿಕೊಟ್ಟರೆ ನನ್ಹೆಂಡ್ರು ಮಕ್ಕಳ ಕಾಪಾಡಿದ ಪುಣ್ಯಬರ್ತದೆ".

"ಸೋಮಶರ್ಮರ ಮನೆಯಲ್ಲಿ ಕೆಲಸ ಇನ್ನೆಷ್ಟುದಿನವಿರುತ್ತದೆ".

"ರಂಗ ಇನ್ನೆಂಟು ದಿನಕ್ಕೆ ಬರ್ತಾನೆ. ಅವನು ಬಂದ ಗಳಿಗ್ಗೆ ಕೆಲ್ಸ ನಿಂತ್ಹೋಗ್ತದೆ. ಅರಮನೇಲಿ ಒಂದು ಜವಾನ್ಕೆ ಮಾಡ್ಸಿಕೊಟ್ರೆ ನಿಮ್ಹೆಸ ರೇಳ್ಕೊಂಡು ಮನೇಲಿ ದೇವರಿಗೆ ದೀಪ ಕತ್ತಸ್ತೀನಿ ನನ್ನೊಡೆಯಾ.

ಊರ್ಬಿಟ್ಟು ಹೊರ್ಡುವಾಗ ನಿಮ್ಮನ್ನಂಬ್ಕೊಂಡೇ ಇಲ್ಲಿಗೆ ಬಂಗದ್ದು. ನಮ್ಮೂರಯ್ಯನೋರ ಮಕ್ಕಳು ಅರಮನೇಲಿದ್ದಾರೆ. ಅವರ ಕಾಲಿಗ್ಬೀಳು ಎಂತ ನಮ್ಮಪ್ಪ ಹೇಳಿಕಳಿಸ್ದ ಬುದ್ದೀ".

"ಆಗಲಿ. ಇನ್ನು ಹದಿನೈದು ದಿನಕ್ಕೆ ನಮ್ಮ ಕಛೇರೀಲಿ ಒಂದು ಜವಾನೀಕೆಲ್ಸ ಖಾಲೀಬೀಳುತ್ತೆ. ಆಗ ನಿನಗೆ ಹೇಳುತ್ತೇನೆ. ಮನೆ ಹತ್ತಿರ ಆಗಾಗ ಬಂದು ಹೋಗುತ್ತಾ ಇರು. ಆಗರೆ ನೋಡು ನೀನು ನಂಬಿಕೆಯಾಗಿ ಕೆಲಸಮಾಡಬೇಕು. ಏನು ಹೇಳುತ್ತೀ"?

"ನನ್ನಿಂದ ನಿಮಗೆ ಕೆಟ್ಟೆಸರು ತಂದೇನಾ ಬುದ್ದೀ. ನಮ್ಮಪ್ಪ, ನಮ್ತಾತ ಎಲ್ಲಾ ನಿಮಗ್ಗೊತ್ತು. ಯಾರಾದರೂ ಹಂಗೆ ಮಾಡಿದಾರಾ. ನಮ್ಮ ವಂಸದ ಹೆಸರ ನಾ ಕೆಡಿಸೇನಾ".

"ಸರಿ ಹಾಗಾದರೆ. ನನ್ನ ಅಷ್ಟುದೂರ ಬಿಟ್ಟು ಬರುವಿಯಂತೆ ಬಾ. ಹಾಗೇ ನಿನಗೆ ಹೇಳಬೇಕಾದ ಮಾತೊಂದಿದೆ ಅದನ್ನೂ ಹೇಳುತ್ತೇನೆ".

"ಆಗಲಿ ನನ್ನೊಡೆಯಾ" ಎಂದು ಹೇಳಿ ಹದಿನೈನು ದಿನಗಳಕೆಳಗೆ ವಿಜಯಪುರಕ್ಕೆ ಕೆಲಸವನ್ನು ಹುಡುಕಿಕೊಂಡು ಬಂದಿದ್ದ ಸಿದ್ದನು ತನ್ನೂರಿನವರಾದ ಶ್ರೀಕಂಠಯ್ಯನವರ ಸಂಗಡ ಅವರ ಮನೆಕಡೆ ಹೊರಟನು.

## ೨

ವಿಶ್ವಶಿಲ್ಪಿಯ ನಿಯಮಬದ್ಧಳಾದ ಭೂಮಾತೆಯು ತನ್ನ ಚಲನೆಯಲ್ಲಿ ನಿರತಳಾಗಿ ಪ್ರಾಣದಾಯಕವೂ ಪ್ರಾಣಪೋಷಕವೂ ಆದ ಸೂರ್ಯರಶ್ಮಿಯನ್ನು ಸೋಮಪುರದವರಿಗೆ ಮರೆಮಾಡಿ ಸುಮಾರು ನಾಲ್ಕೈದು ಗಂಟೆಗಳಾಗಿರಬಹುದು. ಕೃಷ್ಣಪಕ್ಷದ ಕಡೆಯ ದಿನಗಳು. ಜೊತೆಗೆ ಆಕಾಶದಲ್ಲಿ ಸ್ವಲ್ಪ ಮೋಡಗಳೂ ಸೇರಿ ಕತ್ತಲೆಯನ್ನು ಇನ್ನೂ ಕಪ್ಪಾಗಿ ಮಾಡಿವೆ. ದುಡಿದು ಶ್ರಮಪಟ್ಟ ಪ್ರಾಣಿವರ್ಗವೆಲ್ಲವೂ ಆಯಾಸಪರಿಹಾರಕವಾದ ನಿದ್ರಾ

ಸೌಖ್ಯವನ್ನನುಭವಿಸುತ್ತಿವೆ. ಆಗಾಗ ಎಲ್ಲೋ ಕೂಗುವ ಗೂಗೆಯ ಶಬ್ದ, ನರಿಗಳ ಕೂಗು, ನಾಯಿಗಳ ಬೊಗಳುವಿಕೆ, ಮಳುಪುಪ್ಪಟೆಗಳ ಚೀತ್ಕಾರ ಇವುಹೊರತು ಬೇರೆ ಶಬ್ದಗಳಾವುವೂ ಕೇಳಿಬರುತ್ತಿಲ್ಲ. ಸೋಮಪುರದ ಹತ್ತಿಪ್ಪತ್ತು ಮನೆಯವರೆಲ್ಲರೂ ಒಂದೆರಡು ಕನಸುಗಳನ್ನು ಕಂಡಿದ್ದಾರೆ. ಎಲ್ಲರೂ ಎಂದರೆ ಸ್ವಲ್ಪ ತಪ್ಪಾಗಬಹುದು—ಅನೇಕರು. ಒಬ್ಬರಂತೂ ತಮ್ಮ ಕೆಲಸದಲ್ಲಿ ತೊಡಗಲು ಈ ಶಾಂತತೆಯನ್ನೇ ಎದುರುನೋಡುತ್ತಿದ್ದ ರೆಂದು ಕಾಣುತ್ತದೆ. ಅವರು ಆ ಹಳ್ಳಿಯ ಮಠದಯ್ಯನವರಾದ ಶಿವರಾ ಮಯ್ಯನವರು.

ಅವರ ಮನೆ ಬಹಳ ಚಿಕ್ಕದು. ಒಂದು ಅಡುಗೆಮನೆ, ಒಂದು ನಡುಮನೆ, ಒಂದು ಕೊಠಡಿ, ಹಿಂಭಾಗದಲ್ಲಿ ಒಂದು ಬಚ್ಚಲುಮನೆ ಮತ್ತು ಹಸುವಿನ ಕೊಟ್ಟಿಗೆ. ಚಿಕ್ಕಮನೆಯಲ್ಲಿ ಅವರ ಪತ್ನಿ ಲಕ್ಷ್ಮೀದೇವಮ್ಮನವರು ಮಲಗಿ ನಿದ್ದೆಹೋಗಿದ್ದಾರೆ. ನಡುಮನೆಯಲ್ಲಿ ಒಂದು ಚಾಪೆ ಹಾಸಿದೆ. ಅದರಮೇಲೊಂದು ಸುಮಾರು ಒಂದೂವರೆ ಅಡಿ ಎತ್ತರದ ಇಳಿಜಾರು ಮೇಜು ಅದರ ಹತ್ತಿರ ಎಡಗಡೆ ಶುಭ್ರವಾಗಿ ಒರಸಿ ಇಟ್ಟಿರುವ ಒಂದು ಲಾಟೀನು. ಬಲಗಡೆ ಮುಚ್ಚಳ ತೆಗೆದು ಇಟ್ಟಿರುವ ಒಂದು ಮಸೀಕುಡಿಕೆ. ಮೇಜಿನ ಮೇಲೆ ತೆರೆದಿರುವ ಒಂದು ಬಿಳಿಯ ಹಾಳೆಯ ಪುಸ್ತಕ. ಶಿವ ರಾಮಯ್ಯನವರು ಕೈಯಲ್ಲಿ ಲೇಖನಿಯನ್ನು ಹಿಡಿದಿದ್ದಾರೆ. ಮನಸ್ಸಿನಲ್ಲಿ ಉಕ್ಕಿಬರುವ ಉಚ್ಚಭಾವನೆಗಳನ್ನು ಸರಿಯಾಗಿ ಚಿತ್ರಿಸುವ ಯೋಗ್ಯಪದ ಗಳನ್ನು ಹುಡುಕುತ್ತಿರುವರೋ ಎಂಬಂತೆ ಕಾಣಿಸುತ್ತದೆ. ಹೀಗೆ ಅವರು ಕುಳಿತಿರುವಾಗ ಕ್ರೀಂಯ್ ! ಕ್ರೀಂಯ್ !! ಎಂದು ಮೋಟಾರಿನ ಶಬ್ದವು ಆ ನಿಶ್ಶಬ್ದತೆಯಲ್ಲಿ ಅತಿಕರ್ಕಶವಾಗಿ ಕೇಳಬಂತು. ಇದು ಶಿವರಾಮಯ್ಯ ನವರ ವಿಚಾರ ವಾಹಿನಿಗೆ ಒಂದು ಅಡ್ಡಕಟ್ಟೆಹಾಕಿದಂತಾಗಿ ಅವರ ಮನಸ್ಸು ಮೋಟಾರಿನ ಮೋಟಾರಿನಲ್ಲಿರಬಹುದಾದ ವ್ಯಕ್ತಿಗಳ ವಿಚಾರ ಊಹಿಸುವು ದಕ್ಕೆ ಹೊರಟಿತು. ಹಸುರು ಮೇವನ್ನು ಕಂಡು ತಾವು ಹೋಗುತ್ತಿದ್ದ ಸರಿ ಯಾದ ಮಾರ್ಗವನ್ನು ಬಿಟ್ಟು ಮೇವಿನಕಡೆಗೆ ಹೋಗುವ ಎತ್ತುಗಳನ್ನು ತಡೆಗಟ್ಟಿ ಪುನಃ ತಾನು ಅಪೇಕ್ಷಿಸುವ ಮಾರ್ಗದಲ್ಲಿ ಹೋಗುವಂತೆ ಮಾಡುವ ಗಾಡಿ ಹೊಡೆಯುವವನಂತೆ ಶಿವರಾಮಯ್ಯನವರು ಪುನಃ ತಮ್ಮ ಮನಸ್ಸನ್ನು

ಮೊದಲಿನ ಮಾರ್ಗನಲ್ಲಿ ತಂದುಬಿಟ್ಟರು. ಇನ್ನೇನು ಲೇಖನಿಯು ಪುಸ್ತಕ ದಲ್ಲಿ ಬರೆಯಲು ಪ್ರಾರಂಭಿಸಬೇಕು ಅಷ್ಟರಲ್ಲಿ ಮತ್ತೆ ವಿಘ್ನ ಬಂತು. ಯಾರೋ ಬಾಗಿಲನ್ನು ತಟ್ಟಿದರು. ಶಿವರಾಮಯ್ಯನವರು ಕೂತ ಸ್ಥಳ ದಿಂದಲೇ "ಯಾರು" ಎಂದರು.

"ನಾವು ಈಲಿಗೆ ಹೋಸಬರು. ನಮ್ಮದು ವೀಜಯಪುರ್. ತಮ್ಮಿಂಡ ಸ್ವಲ್ಪ ಉಪಕಾರ ನಮಗೆ ಬೇಕು. ಡಯವಿಟ್ಟು ಬಾಗಿಲೂ ತೆರೆಯೀರಿ" ಎಂದು ಹೊರಗಿನಿಂದ ಉತ್ತರ ಬಂದಿತು.

ಅವರೇ ಹೊಸಬರೆಂದು ಹೇಳಿಕೊಂಡರು. ಧ್ವನಿ ಅಪರಿಚಿತ. ಮಾತ ನಾಡುವ ಸರಣಿಯನ್ನು ನೋಡಿದರೆ ಅನ್ಯದೇಶೀಯರದಂತಿತ್ತು. ಶಿವರಾ ಮಯ್ಯನವರು ಎಡಗೈಯಲ್ಲಿ ಲಾಟೀನನ್ನು ತೆಗೆದುಕೊಂಡು ಹೊದೆದ ಬಟ್ಟೆ ಗಳನ್ನು ಸರಿಮಾಡಿಕೊಳ್ಳುತ್ತಾ ಬಂದು ಬಾಗಿಲನ್ನು ತೆಗೆದರು.

ಹೊರಗೆ ಇಬ್ಬರು ನಿಂತಿದ್ದರು. ಒಬ್ಬರು ಪುರುಷರು ಇನ್ನೊಬ್ಬರು ಸ್ತ್ರೀ. ಇಬ್ಬರೂ ಐರೋಪ್ಯರು. ಗಂಡಸು ಒಂದು ಕಾಕಿಯ ಚಲ್ಲಣ, ಬಿಳಿಯ ಷರಟು, ತಲೆಗೆ ಟೋಪಿ, ಕಾಲುಚೀಲ ಬೂಟ್ಸನ್ನು ಹಾಕಿದ್ದರು. ಗುಂಡು ಮುಖ, ಮುಖದಲ್ಲಿ ಮುಗುಳ್ನಗೆ. ಸ್ತ್ರೀಯು ತಲೆಗೆ ಟೋಪಿಯನ್ನು ಧರಿಸಿದ್ದಳು. ಹಾಕಿಕೊಂಡಿದ್ದ ಚೀಟಿಯ ಲಂಗವು ಮೊಳಕಾಲಿನ ಕೆಳಗೆ ಬರುತ್ತಿದ್ದಿತು. ಕಾಲುಚೀಲ, ಎತ್ತರದ ಹಿಮ್ಮಡಿಯ ಬೂಟ್ಸು ಕಾಲನ್ನು ಕಾಪಾಡುತ್ತಿದ್ದುವು. ಕೈಯಲ್ಲಿ ಒಂದು ಚರ್ಮದ ಕೈಚೀಲ ತೂಗಾಡು ತ್ತಿತ್ತು. ನೋಡಿ ಶಿವರಾಮಯ್ಯನವರು ಸ್ವಲ್ಪ ಚಕಿತರಾದರು. ಐರೋ ಪ್ಯರು "ಕ್ಷಮಿಸಬೇಕು. ನಾನು ಒಬ್ಬ ಪಾದ್ರಿ. ಈಕೆ ನಾನ್ನ ಪತ್ನಿ. ನಾನ್ನ ಹೆಸರೂ ಟಾನಸ್ಲೆ. ನಾವು ನಮ್ಮ ಮೋಟಾರ್‌ನಲ್ಲಿ ನಾಗೂರಿನಿಂಡ ವೀಜಯಪುರ್‌ಗೆ ಹೋಗುತ್ತಿಡ್ಡೇವೆ. ನಿಮ್ಮ ಊರ ಹತ್ತಿರ ಮೋಟಾರ್ ಇಡ್ಡಕ್ಕಿಡ್ಡಂತೆ ನಿಂತೂ ಹೋಯಿತು. ಯಂತ್ರವನ್ನು ಬೀಚ್ಚಿ ನೋಡಲು ಬಹಾಳ ಕತ್ತಲು. ಸುತ್ತಲೂ ನೋಡಿಡೆ. ನಿಮ್ಮ ಡೀಪ ಕಂಡಿತು. ಈಲ್ಲಿಗೆ ಬಂಡಿಡೇವೆ. ತಾವು ಸ್ವಲ್ಪ ಲ್ಯಾಂಟರನ್ ಅರ್ಡಗಂಟೆ ಕೊಟ್ಟರೆ ಯಂತ್ರ

ವನ್ನು ಬೀಚ್ಚಿ ನೋಡಿ ಸರಿಮಾಡಿಕೊಂಡು ಪ್ರಯಾಣವಾಡುತ್ತೇವೆ" ಎಂದರು.

"ಆಗತ್ಯವಾಗಿ ಆಗಲಿ. ದಯವಿಟ್ಟು ಒಳಗೆ ಬನ್ನಿ" ಎಂದು ಹೇಳುತ್ತಾ ಚಿಕ್ಕಮನೆಯ ಸಮೀಪಕ್ಕೆ ಹೋಗಿ ಸ್ವಲ್ಪಗಟ್ಟಿಯಾಗಿ "ಇಲ್ಲಿ ನೋಡು! ಸ್ವಲ್ಪ ಎಚ್ಚರಮಾಡಿಕೊಂಡು ಬರುತ್ತೀಯಾ. ಹೆಂಗಸರೊಬ್ಬರು ಬಂದಿದ್ದಾರೆ" ಎಂದು ಶಿವರಾಮಯ್ಯನವರು ಕೂಗಲು ಲಕ್ಷ್ಮೀದೇವಮ್ಮನವರು ಬಾಗಿಲನ್ನು ತೆಗೆದುಕೊಂಡು ಹೊರಗೆ ಬಂದು ಹೊಸಬರನ್ನು ಅದರಲ್ಲೂ ಬಿಳಿಯ ಜನರನ್ನು ನೋಡಿ ಸ್ವಲ್ಪ ಹೆದರಿಕೆ ತುಸು ನಾಚಿಕೆಯಿಂದ ದೂರ ನಿಂತರು. ಟಾನಸ್ಲೇಯವರು "ನಾನ್ನು ಪತ್ನಿಗೂ ಸ್ವಲ್ಪ ಕನ್ನಡ ಬರೂತ್ತದೆ. ಅಲ್ಲವೇ ಲಿಲ್ಲೀ" ಎಂದರು.

ಲಿಲ್ಲಿಯವರು "ಕಿವಿಗೆ ಇಂಪಾದ ನಿಮ್ಮ ಬಾಷೆ ನನಗೂ ಸ್ವಲ್ಪ ಗೊತ್ತು. ಆದರೆ ಚೆನಾಗಿ ಬರೂವುದಿಲ್ಲ. ಸರಿಯಾಗಿ ಅಬ್ಯಾಸಮಾಡಿ ನಿಮ್ಮಲ್ಲಿ ನಾನೂ ಒಬ್ಬಲಾಗಬೇಕೆಂಬ ಆಸೆ ಬಹಲ ಇದೆ" ಎಂದರು.

ಲಕ್ಷ್ಮೀದೇವಮ್ಮನವರು ಇನ್ನೂ ಒಂದು ಚಾಪೆಯನ್ನು ಹಾಸಿ "ಕುಳಿತುಕೊಳ್ಳೀಮ್ಮ" ಎಂದರು. ಲಿಲ್ಲಿಯವರಿಗೆ ತೊಂದರೆಗಿಟ್ಟುಕೊಂಡಿತು. ತಾವು ಹಾಕಿಕೊಂಡಿರುವ ಉಡುಪು ಚಾಪೆಯ ಮೇಲೆ ಕುಳಿತು ಕೊಳ್ಳಲು ಸಹಕಾರಿಯಲ್ಲವೆಂಬುದನ್ನು ಹೇಳಲು ಕಷ್ಟ. ಕುಳಿತುಕೊಳ್ಳುವುದು ಇನ್ನೂ ಕಷ್ಟ. ಐರೋಪ್ಯರ ಪದ್ಧತಿಗಳನ್ನು ಸ್ವಲ್ಪ ತಿಳಿದುಕೊಡಿದ್ದುದರಿಂದಲೋ ಏನೋ ಶಿವರಾಮಯ್ಯನವರು "ಅವರಿಗೆ ಚಾಪೆಯ ಮೇಲೆ ಕುಳಿತುಕೊಳ್ಳುವ ಅಭ್ಯಾಸ ಇರಲಾರದು. ನಮ್ಮಲ್ಲಿ ಕುರ್ಚಿ ಇಲ್ಲ. ದಯವಿಟ್ಟು ಈ ಪೆಟ್ಟಿಗೆ ಮೇಲೆ ಕುಳಿತುಕೊಳ್ಳಿರಿ" ಎಂದು ಹೇಳುತ್ತಾ ತಮ್ಮ ಪುಸ್ತಕದ ಪೆಟ್ಟಿಗೆಯನ್ನು ಮುಂದಕ್ಕೆ ಎಳೆದರು.

ಲಿಲ್ಲಿಯವರು "ಬಹಲ ವಂದನೆಗಲು" ಎಂದು ಹೇಳಿ ಅದರ ಮೇಲೆ ಕುಳಿತು "ಹೆಂಡ್ರಿಕ್ಸ್ ನೀವು ಪೆಟ್ಟಿಗೆಯ ಆಚೆಯ ತುದಿಯಲ್ಲಿ ಕುಲಿತುಕೊಲ್ಲಬಹುದಲ್ಲಾ" ಎಂದರು.

ಟಾನಸ್ಲೇಯವರು "ನಾನು ಈ ಸ್ನೇಹಿತರೊಡನೆ ಕುಳಿತು ಮಾತನಾಡಲೂ ಈಗ ಅವಕಾಶ ಇಲ್ಲ. ಮೊದಲು ಮೋಟಾರ್ ಪರೀಕ್ಷಿಸಿ ಬರುತ್ತೇನೆ. ಆಮೇಲೆ ಬಹುಶಃ ರಾತ್ರಿ ಎಲ್ಲಾ ಇಲ್ಲೇ ಕಳೆಯಬೇಕಾಗಬಹುದು" ಎಂದು ಶಿವರಾಮಯ್ಯನವರ ಕಡೆ ತಿರುಗಿ "ಲಾಂಡರಕ್ಕಾಗಿ ತಮಗೆ ತೊಂದರೆ ಕೊಡಲೇ" ಎಂದರು.

ಶಿವರಾಮಯ್ಯನವರು ಪತ್ನಿಯ ಕಡೆಗೆ ತಿರುಗಿ "ಇನ್ನೊಂದು ದೀಪವನ್ನು ಹೊತ್ತಿಸಿಕೊಂಡು ಬಾ" ಎಂದರು.

ಅವರು ಒಳಕ್ಕೆ ಹೋಗಿ ಇನ್ನೊಂದು ಲಾಟೀನನ್ನು ತಂದು ಹತ್ತಿಸಿದುದ್ದೇ ಟಾನಸ್ಲೇಯವರು ಲಾಂಡರವನ್ನು ಕೈಗೆ ತೆಗೆದುಕೊಂಡು "ಲಿಲ್ಲೀ ನಾನು ಹೊರಡಲೇ" ಎಂದು ಕೇಳಿ, ಲಕ್ಷ್ಮೀದೇವಮ್ಮನವರ ಕಡೆ ತಿರುಗಿ ಮುಗುಳ್ನಗೆ ನಗುತ್ತ "ನಾನು ಲಾಂಡರ ಹಿಂತಿರುಗಿ ತರುವ ತನಕ ಈಕೆಯನ್ನು ಹೊರಗೆ ಬಿಡಬೇಡಿರಿ. ನಿಮ್ಮ ಲಾಂಡರಕ್ಕೆ ಈಕೆ ಅಡವು" ಎಂದು ಹೇಳುತ್ತಾ ಹೊರಟರು.

ಶಿವರಾಮಯ್ಯನವರು "ನನ್ನ ಲಾಂದರದ ಬೆಲೆಗೆ ಇದು ತಕ್ಕ ಅಡವು ಹೌದೋ ಅಲ್ಲವೋ. ಅಲ್ಲದೆ ಇಂತಹ ಅಡವನ್ನು ಇಟ್ಟುಕೊಂಡರೆ ನನಗೆ ಕಷ್ಟಜಾಸ್ತಿ. ಆದುದರಿಂದ ನನ್ನ ಪದಾರ್ಥದ ಜೊತೆಯಲ್ಲಿ ನಾನೇ ಬರುತ್ತೇನೆ. ಪದಾರ್ಥ ನನ್ನ ವಶದಲ್ಲೇ ಇರಲಿ. ದಯವಿಟ್ಟು ನನ್ನ ಲಾಂದರ ನನ್ನ ಕೈಗೆ ಕೊಡಿ" ಎಂದು ನಗುತ್ತಾ ಹೇಳಿ ಟಾನಸ್ಲೇಯವರಿಂದ ಲಾಂದರ ಕೈಗೆ ತೆಗೆದುಕೊಂಡು ಅವರ ಜೊತೆಯಲ್ಲೇ ಹೊರಟರು.

ಟಾನಸ್ಲೇಯವರು "ನೋಡಿದೆಯಾ ಲಿಲ್ಲೀ. ಲಾಂಡರವನ್ನು ಕೊಡುವುದಲ್ಲದೆ ಅದನ್ನು ತೆಗೆದುಕೊಂಡು ನಾನೊಬ್ಬನೇ ಹೋಗುವ ಕಷ್ಟ ತಪ್ಪಿಸಿ ನನ್ನ ಸಹಾಯಕ್ಕೆ ಬರಲು ಎಷ್ಟು ಬುದ್ಧಿವಂತಿಕೆ ಮಾತಾಡುತ್ತಾರೆ. ಈಡಕ್ಕೆ ನಾವು ಬಾಹಳ ಕೃತಜ್ಞರಾಗಿ ಇರಬೇಕು" ಎನ್ನುತ್ತಾ "ತಮ್ಮ ಇಷ್ಟದಂತೆಯೇ ಆಗಲಿ" ಎಂದು ಶಿವರಾಮಯ್ಯನವರೊಡನೆ ಹೊರಟರು.

ಮನೆಯಲ್ಲಿ ಹೆಂಗಸರಿಬ್ಬರೇ ಉಳಿದರು. ಒಬ್ಬೊಬ್ಬರು ಒಂದೊಂದು ಸಂಸ್ಕೃತಿಯವರು. ಲಕ್ಷ್ಮೀದೇವಮ್ಮನವರು ಉಟ್ಟಿರುವುದು ಒಂದು ರೇಷ್ಮೆ ಯಂಚಿನ ನೂಲಿನ ಸೀರೆ. ಕಪ್ಪು ಬಣ್ಣದ್ದು. ಅಂಚು ಕೆಂಪು. ತೊಟ್ಟಿ ರುವುದು ಅದೇ ಬಣ್ಣದ ಖಣದ ರವಿಕೆ. ಕೊರಳಲ್ಲಿ ಮಾಂಗಲ್ಯ ಹೊರತು ಬೇರೆ ಆಭರಣಗಳಿಲ್ಲ. ದುಂಡಾದ ಮುಖ. ತಾವರೆಯ ಬಣ್ಣಕ್ಕೆ ತುಸು ಬಿಡುವ ಕೆಂಪು ಬಣ್ಣ. ಹಣೆಯಲ್ಲಿ ದುಂಡು ಕುಂಕುಮ. ಹೊಳೆಯುತ್ತಿ ರುವ ಕಪ್ಪುಹಾಲೆಯ ಬಿಳಿಯ ಕಣ್ಣುಗಳು. ಮಲಗಿದ್ದುದರಿಂದ ಅಸ್ತ ವ್ಯಸ್ತವಾಗಿದ್ದ ಕಪ್ಪಾದ ಮುಂಗುರುಳುಗಳು ಮುಖದ ಮೇಲೆ ಬಿದ್ದಿವೆ. ನಿಂತಿರುವ ನಿಲುವಿನಲ್ಲಿ ಸ್ವಾಭಾವಿಕವಾದ ಒಂದು ಚೆಲುವು, ಗಂಭೀರ. ಲಿಲ್ಲಿ ಯವರ ತಲೆಯ ಕೂದಲು ಸ್ವಲ್ಪ ಕೆಂಪುಛಾಯೆಯದು. ಎಲ್ಲವನ್ನೂ ಬಾಚಿ ಹಿಂದೆ ಗಂಟುಹಾಕಿದ್ದಾರೆ. ಕೂದಲು ಹಾರಾಡದಿರಲೆಂದು ಕೂದಲಿನ ಬಣ್ಣವನ್ನು ಹೋಲುವ ಕೆಂಪುದಾರದ ಬಲೆಯ ಚೀಲವನ್ನು ತಲೆಗೆ ಹಾಕಿ ದ್ದಾರೆ. ಸ್ವಲ್ಪ ಉನ್ನದವಾದ ಮುಖ—ಚಂದ್ರಬಿಂಬದಂತೆ ಬಿಳುಪಾದುದು. ಕಣ್ಣಾಲೆಗಳ ಛಾಯೆ ಸ್ವಲ್ಪ ನೀಲ—ಮನೋಹರವಾದ ಹೊಳಪು. ತೊಟ್ಟಿದ್ದ ಲಂಗವು ಡೌಲಾಗಿಲ್ಲದಿದ್ದರೂ ಬೆಲೆಬಾಳುವ ಬಟ್ಟೆಯದು. ಕೈಲಿದ್ದ ಚರ್ಮದ ಚೀಲದ ಬಾಯಿಯ ಹತ್ತಿರ ಆಂಗ್ಲೇಯ ಪದ್ಧತಿಯನ್ನನುಸರಿಸುವ ವೈದ್ಯರು ಹೃದಯದ ಮಿಡಿತವನ್ನು ಪರೀಕ್ಷಿಸುವ ಸ್ಟೆತಾಸ್ಕೋಪ್ ಎಂಬ ಸಾಧನ ತಲೆಹಾಕುತ್ತಿತ್ತು. ಗಂಡಸರು ಹೊರಟುಹೋಗುತ್ತಲೇ ಲಿಲ್ಲಿ ಯವರು ಮಾತಿಗೆ ಪ್ರಾರಂಭಿಸಿದರು.

"ನೀವು ನಿದ್ರೆಮಾಡುತ್ತಾ ಇದ್ದಿರಿ. ನಮ್ಮಿಂದ ನಿಮಗೆ ತೊಂದರೆ ಆಯಿತು".

"ಏನೂ ಇಲ್ಲ. ನಾನು ಮಲಗಿ ಸುಮಾರು ಅರ್ಧ ಗಂಟೆ ಆಗಿರ ಬಹುದು. ಅಷ್ಟೇ. ಅವರು ಇನ್ನೂ ಮಲಗಿಯೂ ಇರಲಿಲ್ಲ. ಬಹಳ ಹೊತ್ತಾದ ಮೇಲೆ ಪ್ರಯಾಣ ಹೊರಟಹಾಗೆ ಕಾಣುತ್ತದೆ".

"ಪ್ರಯಾಣ ಹೊತ್ತಿಗೆ ಸರಿಯಾಗಿ ಪ್ರರಂಭಿಸಿದೇವು. ನಾವು ನಾ ಗೂರು ಬಿಟ್ಟಾಗ ಸಾಯಂಕಾಲ ಐದು ಗಂಟೆ. ಈ ಊರಿಗೆ ಎಂಟು

ಹತ್ತು ಮೈಲಿ ದೂರದಲ್ಲಿ ಎದುರಿಗೆ ಒಂದು ಎತ್ತಿನಗಾಡಿ ಬಂತು. ಕೆಲವು ಜನರು ಮುಂದೆ ಬಂದು ಕೈತೋರಿಸಿದರು. ಮೋಟಾರ್ ನಾವು ನಿಲ್ಲಿಸಿದೆವು. ಹೆಂಡ್ರಿಕ್ಸ್ ಕೆಲಗೆ ಇಲಿದು ಕೇಲಿದರು. ಗಾಡಿಯಲ್ಲಿ ಒಬ್ಬ ಗರ್ಭಿಣಿ ಹೆಂಗಸು ಇದ್ದಲು. ಆಕೆಗೆ ಪ್ರಸುವ ಕಷ್ಟ ಆಗಿತ್ತು. ಆನುದರಿಂದ ನಾಗೂರು ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತಿದ್ದರು. ಎತ್ತುಗಲು ಮೋಟಾರ್ ಶಬ್ದಕ್ಕೆ ಹೆದರಬಹುದು. ಗಾಡಿ ಬೇರೆಕಡೆ ಎಲೆಯುಬಹುದು. ಆದುದರಿಂದ ನಿಲ್ಲಿಸಿ ಎಂದು ಕೇಲಿದರು. ವಿಜಯಪುರ್‌ದಲ್ಲಿ ನಾನೂ ಮಿಷನ್ ಆಸ್ಪತ್ರೆಯಲ್ಲಿ ವೈದ್ಯಲು. ಇದನ್ನು ಕೇಲಿ ನಾನು ಕೆಲಗೆ ಇಲಿದೆನು. ಹೆಂಡ್ರಿಕ್ಸ್‌ಗೆ ನಾನು ಏಕೆ ಇಲಿದೆನೆಂದು ತಿಲಿಯಿತು. ಆ ಜನಗಳಿಗೆ ನಾನು ವೈದ್ಯಲು, ಬಹಾಲ ಕಷ್ಟವಿದ್ದರೆ ನೋಡಿ ಸಹಾಯ ಮಾಡಲು ಸಾಧ್ಯ ಇದ್ದರೆ ಮಾಡುತ್ತಾರೆ. ನಿಮಗೆ ಇಷ್ಟವೋ ಎಂದು ಕೇಲಿದರು. ಆ ಜನಗಲು ಸಂತೋಷದಿಂದ ಒಪ್ಪಿದರು. ಗಾಡಿಯನ್ನು ನಿಲ್ಲಿಸಿ ಆಕೆಯನ್ನು ಪರೀಕ್ಷಿಸಿದೆನು. ಆಕೆ ಬಹಾಲ ಸಂಕಟಪಡುತ್ತಿಗ್ದಲು. ಸ್ವಲ್ಪ ಹೊತ್ತಿನಲ್ಲೇ ಪ್ರಸುವ ಆಗಬಹುದೆಂದು ನನಗೆ ತೋರಿತು. ಆ ಸ್ವಲ್ಪಕಾಲದಲ್ಲಿ ಗಾಡಿ ನಾಗೂರು ಸೇರಲು ಕಷ್ಟ. ನಾನು ಆ ಜನಗಲಿಗೆ ಹಾಗೆ ತಿಲಿಸಿದೆ. ಅವರು ಸಹಾಯಮಾಡಬೇಕೆಂದು ಕೇಲಿಕೊಂಡರು. ಗಾಡಿಯನ್ನು ನಿಲ್ಲಿಸಿದೆ. ಆ ಜನಗಲಿಗೆ ತಿಲಿಸಿ ನೀರು ಬಿಸಿಮಾಡಿಸಿದೆ. ನನ್ನ ಈ ಚೀಲದಲ್ಲಿ ಒಂದೆರಡು ಉಪಕರನಗಲಿದ್ದವು. ಮಗು ಹುಟ್ಟಲು ಸಹಾಯ ಮಾಡಿದೆ. ದೇವರ ದಯ ಇತ್ತು. ಅರ್ಧ ಗಂಟೆಯಲ್ಲಿ ಗಂಡು ಮಗ ಹುಟ್ಟಿದನು. ತಾಯಿಗೆ ಬಹಾಲ ಆನಂದ ಆಯಿತು. ಅದು ನೋಡಿ ನನಗೂ ಆನಂದ ಆಯಿತು. ಕಷ್ಟಪಟ್ಟರೆ ಫಲ ಅಂದುಕೊಂಡೆ. ತಾಯಿ ಮಗು ಗಾಡಿಯಲ್ಲಿ ಸರಿಯಾಗಿ ಮಲಗಿಸಿದೆನು. ಗಾಡಿಯನ್ನು ಹಿಂದೆ ತಿರುಗಿಸಿದರು. ಆಮೇಲೆ ನಾವು ಹೊರೆಟೆವು. ಆ ಜನಗಲು ಬಹಾಲ ವಂದನೆಗಳನ್ನು ಅರ್ಪಿಸಿದರು. ನಾವು ಎಲ್ಲಾ ದೇವರ ದಯ ಎಂದು ಹೊರಟೆವು. ಇದು ಒಂದು ಗಂಟೆ ತೆಗೆದುಕೊಂಡಿತು. ಬರುತ್ತಾ ದಾರಿಯಲ್ಲಿ ನಮ್ಮ ಗಾಡಿ ವೇಗ ಏಕೋ ಕಡಿಮೆ ಆಯಿತು. ನಿಮ್ಮ ಊರ ಹತ್ತಿರ ಪೂರ್ತ ನಿಂತುಹೋಯಿತು. ಹೆಂಡ್ರಿಕ್ಸ್ ಸರಿಪಡಿಸಲು ನೊಡಿದರು. ಕತ್ತಲೆ ಆಗಿತ್ತು. ಸರಿಯಾಗಿ

ಕಾಣಲಿಲ್ಲ. ಬೇರೆ ಯಾರ ಮೋಟರು ಬರಬಹುದೆಂದು ಸ್ವಲ್ಪ ನೋಡಿದೆವು. ಬರಲಿಲ್ಲ. ಮೋಟರನ್ನು ಕೂಗಿಸಿದೆವು. ಪ್ರತಿಶಬ್ದ ಬರಲಿಲ್ಲ. ನಿಮ್ಮ ಮನೆಯ ದೀಪ ಕಂಡಿತು. ಇಬ್ಬರೂ ಇಲ್ಲಿಗೆ ಬಂದೆವು. ನಮ್ಮ ತೊಂದರೆ ನಿಮಗೆ ಸ್ವಲ್ಪ ಕೊಟ್ಟೆವು ".

" ನಮಗೆ ಏನೂ ತೊಂದರೆ ಇಲ್ಲ. ನೀವು ಬಹಳ ಕಷ್ಟಪಟ್ಟಿದ್ದೀರಿ. ಇಷ್ಟು ಹೊತ್ತಾದರೂ ಊಟವಿಲ್ಲದಿರುವುದರಿಂದ ಬಹಳ ಹಸಿವಾಗಿರಬೇಕು. ಜೊತೆಗೆ ಈ ಕಾಯುವ ಬೇಜಾರು ಬೇರೆ. ಸ್ವಲ್ಪ ಒಳಗೆ ಹೋಗಿ ಬರುತ್ತೇನೆ" ಎಂದು ಹೇಳುತ್ತಾ ಲಕ್ಷ್ಮೀದೇವಮ್ಮನವರು ಇದ್ದಲು ಒಲೆಯಲ್ಲಿ ಬೆಂಕಿಯನ್ನು ಮಾಡಿ ಒಂದು ತಪ್ಪಲೆಯಲ್ಲಿ ನೀರು ಕಾಯಿಸಲು ಇಟ್ಟರು. ಬಾಣಲೆಯಲ್ಲಿ ತುಪ್ಪ ಒಗ್ಗರಣೆ ಸಾಮಾನುಗಳನ್ನು ಹಾಕಿ, ಸ್ವಲ್ಪ ಅವಲಕ್ಕಿಯನ್ನು ನೀರಿನಲ್ಲಿ ನೆನೆಯಿಸಿದರು. ತೆಂಗಿನಕಾಯಿ ಹೋಳನ್ನೂ ಈಳಿಗೆಯ ಮಣೆಯನ್ನೂ ತೆಗೆದುಕೊಂಡು ಹೊರಗೆ ಬಂದು ಲಿಲ್ಲಿಯವರೆದುರಿಗೆ ಕುಳಿತರು.

ಲಿಲ್ಲಿಯವರು " ಏನು, ಇಷ್ಟುಹೊತ್ತಿನಲ್ಲಿ ಕೆಲಸಕ್ಕೆ ಪ್ರಾರಂಭಿಸಿದಿರಿ. ನಮಗಾಗಿ ಏನೂ ಬೇಡ. ವಿಜಯಪುರ್‌ದಲ್ಲಿ ನಮ್ಮ ಊಟ ಸಿದ್ಧ ಇರುತ್ತದೆ".

" ಇದು ನನ್ನ ಮನೆಯ ಕೆಲಸ. ನಿಮ್ಮ ಕೆಲಸವಲ್ಲ. ವಿಜಯಪುರಕ್ಕೆ ಇನ್ನೂ ಮೂವತ್ತು ಮೈಲಿ ಇರಬಹುದಲ್ಲವೆ? ಮಕ್ಕಳೆಲ್ಲಿ ತಾಯಿ? ಗಾಡಿಯಲ್ಲಿದ್ದಾರೆಯೇ?".

" ನನಗಿನ್ನು ಮಕ್ಕಲಿಲ್ಲ. ಮದುವೆಯಾಗಿ ಎರಡು ವರುಷಗಳಾದುವು. ಅಷ್ಟೇ. ಈಗಾಗಲೇ ನಮಗೆ ಮಕ್ಕಲು ಬೇಕಿಲ್ಲ. ಮಕ್ಕಲು ಕೊಡುವ ತೊಂದರೆಯನ್ನು ಸುಖ ಎಂದು ತಿಲಿದುಕೊಲ್ಲುವ ಮನಸ್ಸು ನಮಗೆ ಇನ್ನೂ ಬಂದಿಲ್ಲ. ಮೊದಲೇ ಮಕ್ಕಲು ಬೇಡ ಅಲ್ಲವೇ?".

ಲಕ್ಷ್ಮೀದೇಮಮ್ಮನವರ ಧ್ವನಿ ಸ್ವಲ್ಪ ಸಣ್ಣದಾಯಿತು. " ನನಗೆ ಅದರ ಅನುಭವ ಇಲ್ಲ. ಆ ವಿಚಾರ ನಾನು ಹೇಳಲಾರೆ" ಎಂದರು.

"ಕ್ಷಮಿಸಿ. ನಾನು ಎಂತಹ ಹೆಡ್ಡಿ. ನಿಮ್ಮ ಮನಸ್ಸಿಗೆ ವ್ಯಥೆ ಮಾಡಿದೆ".

"ಏನೂ ಇಲ್ಲ. ಮಕ್ಕಳಾಗುವುದು ನಮ್ಮ ಪೂರ್ವಜನ್ಮದ ಫಲ" ಎಂದು ಹೇಳುತ್ತಾ ತುರಿದಿಟ್ಟ ಕಾಯಿತುರಿಯನ್ನು ಪಾತ್ರೆಗೆ ತುಂಬಿ "ಇನ್ನು ಐದು ನಿಮಿಷದಲ್ಲಿ ಬರುತ್ತೇನೆ. ಒಬ್ಬರಿಗೇ ಬೇಜಾರಾಗಬಹುದು. ಬೇಕಾದರೆ ಈ ಪುಸ್ತಕವನ್ನು ನೋಡುತ್ತಿರಬಹುದು" ಎಂದು ಒಂದು ಪುಸ್ತಕವನ್ನು ಅವರ ಮುಂದಿಟ್ಟು ಒಳಗೆ ಹೋದರು.

ಲಿಲ್ಲಿಯವರು ಪುಸ್ತಕದ ಹಾಳೆಗಳನ್ನು ತಿರುವಿಹಾಕಲು ಪ್ರಾರಂಭಿಸಿದರು. ಅವರ ಮನಸ್ಸು ಒಳಕ್ಕೆ ಹೋದ ಲಕ್ಷ್ಮೀದೇವಮ್ಮನವರ ವಿಚಾರ ತರ್ಕಿಸುವುದರಲ್ಲಿ ಮಗ್ನವಾಗಿತ್ತು. ಆವೇಳೆಯ ಹೊತ್ತಿನಲ್ಲಿ ಬಂದ ಅಪರಿಚಿತರಿಗೆ ಅವರು ಕೇಳಿದಷ್ಟು ಉಪಕಾರವನ್ನು ಮಾಡುವುದಷ್ಟರಲ್ಲಿ ತೃಪ್ತರಾಗದೆ ಅವರು ಅನ್ಯದೇಶೀಯರೂ ಅನ್ಯಮತಸ್ಥರೂ ಆಗಿದ್ದರೂ ಕೂಡ ಅವರ ಇತರ ಕಷ್ಟಗಳೇನೆಂಬುದನ್ನು ಊಹಿಸಿ ಸಹಾಯಮಾಡುವ ಸರಳತೆಯನ್ನು ನೋಡಿ ಪ್ರಪಂಚದಲ್ಲಿ ಇಂತಹ ಜನಗಳೇ ಎಲ್ಲ ಕಡೆಯಲ್ಲೂ ಇದ್ದರೆ ಎಲ್ಲರೂ ಸೇರಬೇಕೆಂದಪೇಕ್ಷಿಸುವ ಸ್ವರ್ಗವೇ ಇಲ್ಲಿ ಸಿಕ್ಕುವುದೆಂದು ಯೋಚಿಸುತ್ತಿದ್ದರು. ಅಡುಗೆಮನೆಯೊಳಗಿಂದ ಒಗ್ಗರಣೆಯ ಘಂ ಎಂಬ ವಾಸನೆಯೂ ಕಾದ ಕಬ್ಬಿಣದ ಪಾತ್ರೆಗೆ ನೀರು ಹೊಯ್ದ ಶಬ್ದವೂ ಕೇಳಿಬಂದುವು. ಅದೇ ಸಮಯದಲ್ಲೇ ದೂರದಲ್ಲಿ ಮೋಟಾರಿನ ಯಂತ್ರವು ನಡೆಯಲು ಪ್ರಾರಂಭಿಸಿದ ಚಗ್ ಚಗ್ ಎಂಬ ಸಂತೋಷ ಶಬ್ದವೂ ಕೇಳಿಬಂತು. ಲಕ್ಷ್ಮೀದೇವಮ್ಮನವರು ಹೊರಗೆ ಬಂದು "ಬಹಳ ಹೊತ್ತು ಒಬ್ಬರನ್ನೇ ಬಿಟ್ಟಿದ್ದೆ. ಬೇಸರವಾಯಿತೇ?" ಎಂದರು.

"ಏಕೆ ಬೇಸರ, ನೀವು ತಿಂಡಿ ಮಾಡುವ ವಾಸನೆ ನನಗೆ ಬಾಯಿನೀರು ತಂದಿತು. ನೀವು ಮಾಡುವ ಅಡಿಗೆಗಲನ್ನು ನಾನೂ ಕಲಿಯಬೇಕು".

ಅಷ್ಟುಹೊತ್ತಿಗೆ ಹೊರಗೆ ಗಂಡಸರು ಮಾತನಾಡುವ ಸದ್ದು ಕೇಳಿಬಂತು. ಶಿವರಾಮಯ್ಯನವರು ಬಾಗಿಲಲ್ಲಿ ನಿಂತು "ಎಲ್ಲಿ, ಕೈ ತೊಳೆದು

ಕೊಳ್ಳಲು ಎರಡು ತಂಬಿಗೆ ನೀರು ಕೊಡು. ಪಾದ್ರಿಗಳ ಕೈ ಎಣ್ಣೆಯಾಗಿರಬೇಕು. ಅವರಿಗೆ ಸ್ವಲ್ಪ ಸೀಗೇಪುಡಿಯನ್ನು ಕೊಟ್ಟರೆ ಉತ್ತಮ" ಎಂದರು.

ಲಕ್ಷ್ಮೀದೇವಮ್ಮನವರು ಎರಡು ತಂಬಿಗೆ ಬಿಸಿನೀರು, ಕಾಗದನಲ್ಲಿ ಸ್ವಲ್ಪ ಸೀಗೇಪುಡಿ, ಕೈ ಒರಸಿಕೊಳ್ಳಲು ಒಂದು ಸಣ್ಣ ಪಂಚೆ ತಂದು ಕೊಟ್ಟರು. ಇನ್ನೊಂದು ತಂಬಿಗೆಯಲ್ಲಿ ನೀರುತಂದು ಲಿಲ್ಲಿಯವರ ಮುಂದಿಟ್ಟು "ತಾಯಿ, ನೀವೂ ಸ್ವಲ್ಪ ಕೈ ತೊಳೆದುಕೊಳ್ಳಿರಿ" ಎಂದರು.

ಎಲ್ಲರೂ ಕೈ ತೊಳೆದು ಒರಸಿಕೊಂಡು ಒಳಗೆ ಬರುವಹೊತ್ತಿಗೆ ಎರಡು ಲೋಟಗಳಲ್ಲಿ ಬಿಸಿನೀರೂ ಎರಡು ಬಾಳೆಯ ಅಗ್ರಗಳಮೇಲೆ ಒಗ್ಗರಣೆ ಅವಲಕ್ಕಿ ಎರಡು ಬಾಳೆಯಹಣ್ಣುಗಳು ಸ್ವಲ್ಪ ಸಕ್ಕರೆ ಸಿದ್ಧವಾಗಿದ್ದುವು. ಲಕ್ಷ್ಮೀದೇವಮ್ಮನವರು ಅಡಿಗೆಯಮನೆಯ ಬಾಗಿಲಲ್ಲಿ ನಿಂತುಕೊಂಡು "ನಮ್ಮ ಜನರ ಆಹಾರ ನಿಮಗೆ ರುಚಿಸುತ್ತದೋ ಇಲ್ಲವೋ ಅದರಲ್ಲೂ ಇದು ಬಡವರ ಮನೆ. ಹಸಿವಿನ ಹೊತ್ತು. ಆದುದರಿಂದ ಇಟ್ಟಿದ್ದೇನೆ" ಎಂದು ಹೇಳಿ ಪತಿಯಕಡೆ ತಿರುಗಿ "ಇವರುಗಳೊಡನೆ ಮಾತನಾಡುತ್ತಿದ್ದರೆ ಸ್ವಲ್ಪ ಹಸುವನ್ನು ನೋಡಿಕೊಂಡು ಬರುತ್ತೇನೆ" ಎಂದು ಹೇಳಿ ಲಾಂದರವನ್ನು ತೆಗೆದುಕೊಂಡು ಕೊಟ್ಟಿಗೆಗೆ ಹೋದರು.

ಟಾನಸ್ಲೇಯವರೂ ಲಿಲ್ಲಿಯವರೂ ಮುಂದಿಟ್ಟಿದ್ದ ತಿಂಡಿಯನ್ನು ಸ್ವಲ್ಪ ಸ್ವಲ್ಪ ತಿನ್ನುತ್ತಾ ಶಿವರಾಮಯ್ಯನವರೊಡನೆ ಮಾತಿಗೆ ಪ್ರಾರಂಭಿಸಿದರು. ಲಿಲ್ಲಿಯವರು "ಮೋಟರ್ ಸರಿಹೋಯಿತೇ" ಎಂದರು.

ಟಾನಸ್ಲೇ—ಸರಿಹೋಯಿತು. ಆ ಮೋಟರ್ ಸರಿಹೋಗಿದ್ದರೂ (ಹೊಟ್ಟೆಯನ್ನು ತೋರಿಸುತ್ತಾ) ಈ ಮೋಟರ್‌ಗೆ ಎಣ್ಣೆ ಇಲ್ಲಿ ಸಿಕ್ಕದೆ ಇದ್ದಿದ್ದರೆ ಹೊರಡುವಹಾಗಿರಲಿಲ್ಲ.

ಶಿವರಾಮಯ್ಯ—ತಾವು ನಮ್ಮ ಮನೆಗೆ ಏಕೆ ಬರುತ್ತೀರಿ? ತಮಗೆ ಸರಿಯಾಗಿ ಆತಿಥ್ಯ ಮಾಡುವ ಶಕ್ತಿ ನಮಗಿಲ್ಲವಲ್ಲಾ ಎಂದು ವ್ಯಥೆಯಾಗುತ್ತಿದೆ.

ಲಿಲ್ಲಿ—ಅಲ್ಲಿನೋಡಿ! ಹೆಂಡ್ರಿಕ್ಸ್ ಹೇಗೆ ಗಬಗಬ ತಿನ್ನುತ್ತಿದ್ದಾರೆ. ಬಹಾಲ ರುಚಿಯಾಗಿದೆ. ಅಲ್ಲವೆ ಹೆಂಡ್ರಿಕ್ಸ್? ಇದನ್ನು ಹೇಗೆ ಮಾಡಿದರು? ತಮ್ಮ ಪತ್ನಿ ಎಲ್ಲಿ?

ಶಿವರಾಮಯ್ಯ—ಕೊಟ್ಟಿಗೆಗೆ ಹಸುವನ್ನು ನೋಡಲು ಹೋಗಿರಬಹುದು.

ಟಾನಸ್ಲೇ—ಏಕೆ, ಹುಲ್ಲು ಹಾಕುವುದಕ್ಕೇ?

ಶಿವರಾಮಯ್ಯ—ಇರಬಹುದು. ಹಾಗೆಯೇ ಇನ್ನೊಂದು ಸಲ ಹಾಲನ್ನೇನಾದರೂ ಕೊಡುತ್ತದೆಯೋ ಎಂದು ನೋಡಬಹುದು. ತಮಗೆ ಕುಡಿಯಲು ನೀರು ಕೊಡಲು ಸಂಕೋಚವಾಗಿರಬಹುದು.

ಟಾನಸ್ಲೇ—ನೊಡಿಡಿರಾ. ನಮ್ಮಿಂಡ ನಿಮ್ಮಿಬ್ಬರಿಗೂ ಅಲ್ಲದೆ ಆ ಮೂಕಪ್ರಾಣಿಗೂ ತೊಂದರೆ.

ಶಿವರಾಮಯ್ಯ—ತಾವು ಖಂಡಿತ ಹಾಗೆ ಭಾವಿಸಬಾರದು. ಅತಿಥಿಗಳ ಸೇವೆ ಗೃಹಸ್ಥನ ಮುಖ್ಯ ಧರ್ಮ. ಅದಕ್ಕೆ ನೆರವಾಗದ ಸಾಧನ ಸಂಪತ್ತಿಗಳಿಂದೇನು ಪ್ರಯೋಜನ? ಈ ದಿನ ನಮ್ಮ ಕರ್ತವ್ಯವನ್ನು ನೆರವೇರಿಸಲು ಅವಕಾಶ ಒದಗಿಸಿಕೊಟ್ಟಿದ್ದಕ್ಕೆ ನಾನು ನಿಮಗೆ ಕೃತಜ್ಞನಾಗಿರಬೇಕಾಗಿದೆ.

ಲಿಲ್ಲಿ—ಹೆಂಡ್ರಿಕ್ಸ್, ಇನ್ನು ಆ ವಿಚಾರ ಬೇಡ. ತಾವು ಈಷ್ಟು ಹೊತ್ತಿನಲ್ಲಿ ದೀಪ ಉರಿಸುತ್ತಾ ಇದ್ದುದು ನಮ್ಮ ಪುಣ್ಯ.

ಶಿವರಾಮಯ್ಯ—ಅದು ನನ್ನ ನಿತ್ಯದ ಪದ್ಧತಿ.

ಟಾನಸ್ಲೇ—ನಾನು ಬಂಡಾಗ ಏನೋ ಬರೆಯುತ್ತಿದ್ದಿರಿ. ಅಲ್ಲವೆ?

ಶಿವರಾಮಯ್ಯ—ಹೌದು. ಬೇಜಾರಾದಾಗ ಆ ಬೇಜಾರು ಕಳೆಯಲು ನನ್ನ ಮನಸ್ಸಿಗೆ ಹೊಳೆದುದನ್ನು ಕಾಗದದಲ್ಲಿ ಗೀಚಿಡುತ್ತೇನೆ.

ಟಾನಸ್ಲೇ—ಹಾಗೋ. ತಾವು ಬರೆಯುತ್ತಿದ್ದ ಪುಸ್ತಕವನ್ನು ನಾನು ನೋಡಬಹುದೇ.

ಶಿವರಾಮಯ್ಯನವರು "ಅಗತ್ಯವಾಗಿ ನೋಡಬಹುದು" ಎಂದು ಹೇಳುತ್ತಾ ಪುಸ್ತಕವನ್ನು ಮುಂದಿಟ್ಟರು.

ಟಾನಸ್ಲೇಯವರೂ, ಲಿಲ್ಲಿಯವರೂ ತಿಂಡಿಯನ್ನು ತಿಂದು ಮುಗಿಸಿ ಬಾಳೆಯ ಹಣ್ಣುಗಳನ್ನು ತಿಂದು ಕೈ ತೊಳೆದುಕೊಂಡು ವಸ್ತ್ರದಲ್ಲಿ ಒರಸಿ ಕೊಂಡರು. ಟಾನಸ್ಲೇಯವರು ಪುಸ್ತಕವನ್ನು ತೆಗೆದು ನೋಡುತ್ತಾ "ಬರವಣಿಗೆ ಬಹಳ ಸುಂಡರವಾಗಿಡೆ ಗದ್ಯಪದ್ಯಗಳೆಡೂ ಇವೆ. ಅಲ್ಲವೆ?

ಶಿವರಾಮಯ್ಯ—ಹೌದು. ಇದು ಚಂಪೂಗ್ರಂಥ.

ಅಷ್ಟುಹೊತ್ತಿಗೆ ಲಕ್ಷ್ಮೀದೇವಮ್ಮನವರು ಬೇರೆ ಎರಡು ಲೋಟಗಳಲ್ಲಿ ಬಿಸಿಹಾಲನ್ನು ತೆಗೆದುಕೊಂಡು ಬಂದು ಅತಿಥಿಗಳ ಮುಂದಿಡುತ್ತಾ "ಇದು ನಮ್ಮ ಪುಣ್ಯ. ಹಸು ಎರಡನೇಸಲ ಹಾಲುಕೊಟ್ಟಿತು" ಎಂದರು.

ಟಾನಸ್ಲೇ—ನಿಮ್ಮ ಮನಸ್ಸು ಉಡಾರ. ನಿಮ್ಮ ಹಸುವಿನ ಮನಸ್ಸೂ ಅಷ್ಟೇ. ಒಳ್ಳೆಯವರ ಹತ್ತಿರ ಕೆಟ್ಟವರಿಗೆ ಸ್ಥಳ ಇಲ್ಲ. ಕೆಟ್ಟವರು ಬಂಡರೂ ಒಳ್ಳೆಯವರಾಗುತ್ತಾರೆ.

ಹಾಲನ್ನು ಕುಡಿಯುತ್ತಾ ಲಿಲ್ಲಿಯವರು "ನಮಗೆ ಕನ್ನಡ ಚನ್ನಾಗಿ ಬರುವುದಿಲ್ಲ. ಈ ಪುಸ್ತಕದ ಸವಿ ನಮಗೆ ಸಿಕ್ಕುವುದಿಲ್ಲ. ಆದರೆ ಇಷ್ಟು ಅನ್ನಬಲ್ಲೆ. ಬರೆಯುವವರ ಸ್ವಭಾವ ಪುಸ್ತಕದಲ್ಲಿ ಕಂಡುಬರುತ್ತದೆ. ನಿಮ್ಮ ಸರಲ ಸ್ವಭಾವ ನೋಡಿದೆವು. ನಿಮ್ಮ ಪುಸ್ತಕವೂ ರುಚಿಯಾಗಿರ ಬೇಕು" ಎಂದರು.

ಟಾನಸ್ಲೇ "ಲಿಲ್ಲಿ ಸರಿಯಾಗಿ ಹೇಳಿದರು. ಎಂದು ಹೇಳುತ್ತಾ ಕೈಗಡಿಯಾರವನ್ನು ನೋಡಿ ಆಗಲೇ ಹನ್ನೊಂದು ಗಂಟೆಯಾಯಿತು. ಅಪ್ಪಣೆ ಕೊಟ್ಟರೆ ಹೊರಡುವೆವು" ಎಂದರು.

ಎಲ್ಲರೂ ಎದ್ದರು. ಪಾದ್ರಿಗಳು ತಮ್ಮ ಜೇಬಿಗೆ ಕೈಹಾಕಿ ಹಣದ ಚೀಲವನ್ನು ತೆಗೆದು ಬಿಚ್ಚಿದರು. ಲಿಲ್ಲಿಯವರಿಗೆ ಇದನ್ನು ನೋಡಿ ಸ್ವಲ್ಪ ಗಾಬರಿಯಾಗಿ ಯಜಮಾನರ ಕಡೆವಾಲಿ ಕಿವಿಯಲ್ಲಿ ಏನೋ ಹೇಳಲು ಹೊರಟರು. ಅಷ್ಟರಲ್ಲಿ ಟಾನಸ್ಲೇಯವರು ತಮ್ಮ ವಿಳಾಸವನ್ನು ಅಚ್ಚು ಹಾಕಿದ್ದ ಒಂದು ಕಾಗದವನ್ನು ತೆಗೆದುಕೊಂಡು "ಈ ಚೀಟಿಯಲ್ಲಿ ನನ್ನ ವಿಳಾಸ ಇಂಗ್ಲೀಷಿನಲ್ಲಿದೆ. ತಮ್ಮ ಲೇಖಣಿಯನ್ನು ಸ್ವಲ್ಪ ಉಪಯೋಗಿಸಲೇ" ಎಂದು ಲೇಖನಿಯನ್ನು ತೆಗೆದುಕೊಂಡು ಕಾಗದದ ಹಿಂದುಗಡೆ ತಮ್ಮ ವಿಳಾಸವನ್ನು ಕನ್ನಡದಲ್ಲಿ ಬರೆದು ಶಿವರಾಮಯ್ಯನವರಿಗೆ ಕೊಡುತ್ತಾ "ತಾವು ವಿಜಯಪುರ್‌ಗೆ ಬಂದಾಗ ಖಂಡಿತ ನಮ್ಮ ಮನೆಗೆ ಬರಬೇಕು. ದಯ ವಿಟ್ಟು ತಮ್ಮ ವಿಳಾಸ ಈ ಚಿಟಿಯಲ್ಲಿ ಬರೆದುಕೊಡಿ" ಎಂದು ಹೇಳುತ್ತಾ ಇನ್ನೊಂದು ಕಾಗದವನ್ನು ಕೊಟ್ಟರು. ಶಿವರಾಮಯ್ಯನವರು ಬರೆದು ಕೊಡುತ್ತಲು "ತಮ್ಮ ಪುಸ್ತಕ ಯಾವುದು ಆದರೂ ಅಚ್ಚಾಗಿದೆಯೇ?" ಎಂದರು.

ಶಿವರಾಮಯ್ಯ—ಇಲ್ಲ. ಅದಕ್ಕೆ ಅಷ್ಟುಮಟ್ಟಿನ ಯೋಗ್ಯತೆ ಇಲ್ಲ.

ಲಿಲ್ಲಿ—ಹಾಗೆ ಅನ್ನಬೇಡಿ. ನಾನು ಕನ್ನಡ ಕಲಿಯುತ್ತಿದ್ದಾಗ ನನ್ನ ಮನ್ಶಿಗಳು ಒಂದು ಗಾದೆ ತಿಳಿಸಿದ್ದರು. ಏನೆಂದರೆ 'ಹೆತ್ತಲು ಗಿಡ ಮದ್ದಲ್ಲ' ಎಂದು. ನಿಮ್ಮ ಪುಸ್ತಕದ ವಿಚಾರ ಇತರರು ಅಬಿಪ್ರಾಯ ಕೊಡಬೇಕು. ನೀವು ಮೊದಲು ಪುಸ್ತಕ ಅಚ್ಚುಹಾಕಿಸಬೇಕು.

ಶಿವರಾಮಯ್ಯ—ನನಗೆ ಅಷ್ಟರ ಯೋಗ್ಯತೆ ಇಲ್ಲ.

ಟಾನಸ್ಲೇ—ಅಚ್ಚು ಹಾಕಿಸಲು ಅವಕಾಶ ಸಿಕ್ಕಿದರೆ ಅಚ್ಚುಹಾಕಿಸಲು ನಿಮ್ಮ ಅಭಿಪ್ರಾಯ ಏನು?

ಶಿವರಾಮಯ್ಯ—ಅಂತಹ ಕಾಲ ಬಂದಾಗ ಯೋಚನೆಮಾಡುತ್ತೇನೆ.

ಟಾನಸ್ಲೇ—ಅಂತಹ ಕಾಲವನ್ನು ದೇವರು ನಿಮಗೆ ಬೇಗ ಒದಗಿಸಿ ಕೊಡಲಿ ಎಂದು ನಾನೂ ಲಿಲ್ಲಿಯೂ ಪ್ರಾರ್ಥಿಸುತ್ತೇವೆ. ಹೋಗಿಬರುತ್ತೇವೆ. ಅಪ್ಪಣೆಯೇ.

ಶಿವರಾಮಯ್ಯ—ದೇವರ ಅಪ್ಪಣೆ. ಹೋಗಿ ಬರುತ್ತೀರಾ ತಾಯಿ.

ಅತಿಥಿಗಳಿಬ್ಬರೂ ಹೊರಟರು. ಶಿವರಾಮಯ್ಯನವರು ದೀಪವನ್ನು ತೆಗೆದುಕೊಂಡು ಹೊರಟರು. ಮೋಟರಿನಲ್ಲಿ ಕೂತುಕೊಂಡು ಅತಿಥಿಗಳು ಇಬ್ಬರೂ "ನಮಸ್ಕಾರ, ನಮಸ್ಕಾರ" ಎಂದು ಹೇಳುತ್ತಾ ಹೊರಟರು. ಶಿವರಾಮಯ್ಯನವರೂ ಲಕ್ಷ್ಮೀದೇವಮ್ಮನವರೂ ಮನೆಗೆ ಬರುತ್ತಿರುವಾಗ ಶಿವರಾಮಯ್ಯನವರು ಮನಸ್ಸಿನಲ್ಲಿ "ನನ್ನ ಪುಸ್ತಕವೂ ಅಚ್ಚಾಗುತ್ತದೆಯೆ? ಅದು ತಿರುಕನ ಕನಸು" ಎಂದುಕೊಳ್ಳುತ್ತಾ ಮನೆಗೆ ಬಂದರು. ಅವರ ಕನಸಿನಲ್ಲಿ ಅಂದಿನ ರಾತ್ರಿ ತಮ್ಮ ಪುಸ್ತಕ ಅಚ್ಚಾದ ಹಾಗೂ ತಮ್ಮ ಹೆಸರು ದೇಶದಲ್ಲೆಲ್ಲಾ ಪ್ರಸಿದ್ಧಿಗೆ ಬಂದ ಹಾಗೂ ಕಂಡರು. ಮನಶ್ಶಾಸ್ತ್ರಜ್ಞರು ಹೇಳುವುದಿಲ್ಲವೆ-ನಿಜಪ್ರಪಂಚದಲ್ಲಿ ತೀರಲಾರದ ಮನದ ಬಯಕೆ ಕನಸಿನ ಪ್ರಪಂಚದಲ್ಲಿ ಪೂರೈಸುವುದೆಂದು.

೩

ಹಿಂದಿನ ಅಧ್ಯಾಯದ ಸಂಗತಿಯು ನಡೆದ ಮಾರನೆಯ ದಿವಸ ವಿಜಯಪುರದ ಸೋಮಶರ್ಮರ ಮನೆಯ ಜಗಲಿಯ ಮೇಲೆ ಸಿದ್ದನು ಸುಮಾರು ಒಂದು ಒಂದೂವರೆ ವರುಷದ ಬಾಲಕನೊಬ್ಬನನ್ನು ಆಡಿಸುತ್ತಿದ್ದಾನೆ. ಹೊತ್ತು ಸುಮಾರು ಮಧ್ಯಾಹ್ನ ಹನ್ನೆರಡೂವರೆ ಗಂಟೆ ಇರಬಹುದು. ಮಗುವಿನೊಡನೆ ಆಡುವಾಗ ಮಗು ತನ್ನದಲ್ಲವೆಂದೂ ತಾನು ಕೇವಲ ಸೇವಕನೆಂಬುದನ್ನೂ ಮರೆತು ಮಗುವಿನ ಆಟದಲ್ಲಿ ತಾನೂ ಸೇರಿ ಆನಂದಿಸುತ್ತಿದ್ದಾನೆ. ತನ್ನನ್ನು ತಾನೇ ಮರೆತಿರುವ ಆ ಸಮಯದಲ್ಲಿ "ಸಿದ್ದಾ, ಸಿದ್ದಾ" ಎಂದು ಸಣ್ಣ ಧ್ವನಿಯಲ್ಲಿ ಯಾರೋ ಕೂಗಿದಂತಾಯಿತು. ಸಿದ್ದನು ಬೆಚ್ಚಿಬಿದ್ದವನಂತೆ ಕತ್ತೆತ್ತಿ ಸುತ್ತಲೂ ನೋಡಿ ಸಲ್ಪ ದೂರದಲ್ಲಿ ಶ್ರೀಕಂಠಯ್ಯನವರು ರಸ್ತೆಯಲ್ಲಿ ನಿಂತಿರುವುದನ್ನು ನೋಡಿ ಮಗುವನ್ನು ಎತ್ತಿಕೊಂಡು ಅವರ ಸಮೀಪಕ್ಕೆ ಓಡಿಹೋದನು.

"ನಾನು ಹೇಳಿದ್ದು ಜ್ಞಾಪಕವಿದೆಯೋ, ಈ ದಿನ ಇನ್ನು ಸ್ವಲ್ಪ

ಹೊತ್ತಿನಲ್ಲಿ ಕಾಗದ ಬರುವುದು. ಅದು ನಿನ್ನ ಬುದ್ಧಿವಂತಿಕೆಯನ್ನು ಪರೀಕ್ಷಿಸುವುದು".

"ಆಗಲಿ ನನ್ನೊಡೆಯಾ. ನೀವೆಳ್ದಂಗೆ ನಾ ಕುಣೀತೀನಿ. ಆದ್ರೆ ಇದರಿಂದ ನನ್ನಣಿಗಳ್ಗೆ ಏನೂ ಕೆಡೀಲ್ವಲ್ರಾ".

"ಅಂಥ ಕೆಲಸ ನಾನು ಎಂದಾದರೂ ಕನಸಿನಲ್ಲಾದರೂ ಮಾಡ್ತೀನೆ? ನಿನ್ನ ದಣಿಗಳಿಗೆ ಅನ್ಯಾಯ ಇಲ್ಲ. ಇನ್ನೊಬ್ಬರಿಗೆ ಉಪಕಾರ. ಅಷ್ಟೇ. ರಂಗ ಯಾವತ್ತು ಬರುತ್ತಾನೆ ಗೊತ್ತಾಯಿತೆ?".

"ಇನ್ನೆಂಟು ದಿನಕ್ಕೆ ಬರ್ತಾನೆ. ಆಮೇಲೆ ನಿಮ್ಮ ಪಾದವೇ ಗತಿ".

"ನೀನು ಯೋಚನೆ ಮಾಡಬೇಡ. ನಾನು ಕಚೇರಿಲಿ ಹೇಳಿಟ್ಟಿದ್ದೀನಿ. ಇಲ್ಲಿ ನಿನ್ನ ಕೆಲಸಹೋದ ಒಂದು ವಾರದೊಳಗೆ ಬೇರೆ ಕೆಲಸ ಸಿಕ್ಕುತ್ತದೆ. ಆದರೆ ಈ ವಿಚಾರ ಎಲ್ಲಾ ನಾನು ಹೇಳಿದಹಾಗೆ ಮಾಡು. ಅದರಿಂದ ಯಾರಿಗೂ ಕೇಡಿಲ್ಲ. ಆದರೆ ಮಾತ್ರ ಯಾರ ಪತ್ತಿರಾನೂ ಈ ವಿಚಾರ ಬಾಯ್ಬಿಟ್ಟೀಯೆ. ಜೋಕೆ. ನಾನು ಹೊರಡಲೇ?".

"ಒಳ್ಳೇದು ಬುದ್ದಿ ಬಡವನ್ನ ಮರಿಬ್ಯಾಡ್ರಿ". ಎಂದು ಹೇಳಿ ಸಿದ್ದನು ಮಗುವನ್ನು ಕರೆದುಕೊಂಡು ಬರುತ್ತಾ ಜೇಬಿಗೆ ಕೈಹಾಕಿ ಒಂದು ಚೂರು ಕೆಂಪು ಸೀಸದಕಡ್ಡಿಯನ್ನು ತೆಗೆದುಕೊಂಡು ಕೆಳಗೆ ಬಿದ್ದಿದ್ದ ಒಂದು ಹಳೇ ಕಾಗದದ ಮೇಲೆ ಕೆಂಪುಗೀರುಗಳನ್ನೆಳೆಯುತ್ತಾ ಅದನ್ನು ಮಗುವಿಗೆ ತೋರಿಸುತ್ತಾ ಜಗುಲಿಯ ಮೇಲೆ ಕುಳಿತಿದ್ದನು.

ಸುಮಾರು ಅರ್ಧಗಂಟೆ ಹಾಗೆ ಕಳೆದಿರಬಹುದು. ಅಷ್ಟುಹೊತ್ತಿಗೆ ತಲೆಗೆ ಕೆಂಪುರುಮಾಲು, ಬಿಳಿಯ ನಿಲುವಂಗಿ, ಬಿಳಿಯ ಷರಾಯಿ, ಕಾಲಿಗೆ ಎಕ್ಕಡ ಹಾಕಿಕೊಂಡು ಒಂದು ಕೈಯಲ್ಲಿ ನಡುಕಟ್ಟಿನ ಬಟ್ಟೆಯನ್ನೂ ನೀಲಿ ಬಣ್ಣದ ಡವಾಲಿಯನ್ನೂ, ಇನ್ನೊಂದು ಕೈಯಲ್ಲಿ ರೊಟ್ಟಿಲ್ಲಾ ಕೊಳಕಾಗಿ ಅಲ್ಲಲ್ಲೇ ಕಾಗದ ಎದ್ದುಬರುತ್ತಿದ್ದ ಪುಸ್ತಕವನ್ನೂ ಹಿಡಿದುಕೊಂಡು ಅರ

ಮನೆಯ ಕಚೇರಿಯ ಜವಾನನು ಜಗ್ಗುಹಾಕುತ್ತಾ ಬಂದು "ಸ್ವಾಮಿಯವರು ಇದ್ದಾರೆಯೇ. ಏನು ಸಮಯ ?" ಎಂದು ಕೇಳಿದನು.

ಕೂತಬಳಿಯಲ್ಲೇ ಸಿದ್ದನು "ಅವ್ರೆ, ಏನು ಕೆಲ್ಸ" ಎಂದನು.

"ಯಾವೂರಯ್ಯ ನಿಂದು. ಹೊಸಬನಾಗಿ ಕಾಣಿಸ್ತಿ. ರಂಗ ಎಲ್ಲಿ". —ಧ್ವನಿ ಸ್ವಲ್ಪ ಜಬರದಸ್ತಿ ತೋರಿಸಿತು.

"ನಂಗೂ ಇಪ್ಪತ್ತು ದಿವಸದ ಅನುಭೋಗ ಇದೇ ಕಣಯ್ಯ. ಏನು ಇಚಾರ ಹೇಳು. ರಂಗ ಊರಿಗೆ ಹೋಗವ್ನೆ"—ಧ್ವನಿಯಲ್ಲಿ ತಾತ್ಸಾರ ಎದ್ದು ಕಾಣುತ್ತಿತ್ತು.

"ಭಾರಿ ಅನುಭವದಾರ. ಒಳಗ್ಹೋಗಿ ಬುದ್ದಿಯೋರಿಗೆ ಹೇಳು ಅರಮನೆ ಕಚೇರಿಯಿಂದ ಕಾಗದ ಬಂದಿದೇ ಅಂತ"—ಕೆರಳಿದ ಅಧಿಕಾರ ವಾಣಿಗೆ ಲಗಾಮು ಹಾಕಿದ್ದ ಅರಮನೆಯ ಜವಾನ.

"ಕಾಜಗ ನನ್ನ ಕೈಗೆ ಕೊಟ್ಟರೆ ತಗೊಂಡ್ಹೋಗಿ ಕೊಡಲ್ವಾ. ಅಂಚೆ ಜವಾನ ನನ್ನ ಕೈಗೆ ಕಟ್ಟು ಕಟ್ಟು ಕೊಟ್ಹೋಗ್ತಾನೆ. ನಿನ್ನೊಂದು ಕಾಜಗಕ್ಕೆ ಅವರೇ ಬರ್ಬೇಕೆ ?".

"ಅಲೆ ಇವನಾ. ಹೋಗಿ ಹೇಳೋ ಅಂದ್ರೆ ಹೇಳ್ಬೇಕು".—ಕಣ್ಣುಗಳು ಕೆಂಪಾದುವು ಹುಬ್ಬು ಗಂಟಿಕ್ಕಿತು.

ಸಿದ್ದನು ಗೊಣಗುಟ್ಟುತ್ತಾ, ಮಗುವನ್ನು ಕಂಕುಳಿಗೆ ಹಾಕಿಕೊಂಡು ಒಳಕ್ಕೆ ಹೋಗಿ ಒಂದೆರಡು ನಿಮಿಷದ ಮೇಲೆ ಹೊರಗೆ ಬಂದು "ರಾಯರು ಈಗತಾನೆ ಊಟಕ್ಕೆ ಕುಂತವ್ರೆ. ಕಾಜಗ ತಗಂಡು ಒಳಗಿಡು ಎಂದು ಅವ್ಮಾವ್ರು ಹೇಳಿದ್ರು, ಕೊಡಿಲ್ಲಿ" ಎಂದನು.—ಮುಖದ ಭಾವ, ಧ್ವನಿ ನಾನೇ ಗೆದ್ದೆನೆಂದು ಭುಜವನ್ನಪ್ಪಳಿಸುತ್ತಿದ್ದವು.

ಮನಸ್ಸು ಈ ಹುಳುವಿಗೆ ಸೋತೆನಲ್ಲಾ ಎಂದರೂ, ಬಾಯಿಮಾತ್ರ

"ಹಂಗಾದ್ರೆ ನಿನಗೆ ರುಜು ಗಿಜು ಮಾಡೋಕೆ ಬರುತ್ತಾ ಓದಿದೋನೋ ನೀನು" ಎಂದಿತು.

"ಓದು ಬರಾವು ಇಲ್ಲ. ಆದ್ರೆ ರುಜು ಹಾಕ್ತೀನಿ".

"ಉಸ್ಸಪ್ಪಾ" ಎನ್ನುತ್ತಾ ಅಂಗಿಯನ್ನು ಸರಿಮಾಡಿಕೊಳ್ಳುತ್ತಾ ಜಗುಲಿಯಮೇಲೆ ಕೂತುಕೊಂಡು ನಿಧಾನವಾಗಿ ಒಳಜೇಬಿಗೆ ಕೈಹಾಕಿ ಒಂದು ಲಕ್ಕೋಟೆಯನ್ನು ಹೊರಗೆ ತೆಗೆದು ಪುಸ್ತಕವನ್ನು ಬಿಚ್ಚಿ ಒಂದು ಸ್ಥಳವನ್ನು ತೋರಿಸಿ "ಇಲ್ಲಿ ರುಜು ಮಾಡು" ಎಂದನು.

ಸಿದ್ದನ ಕಣ್ಣೆಲ್ಲಾ ಜವಾನನ ಬಟ್ಟೆಬರೆಗಳ ಮೇಲೆ ಇದ್ದವು. ಎದೆ ಮಾತ್ರ ಡವ ಡವ ಎಂದು ಹೊಡೆದುಕೊಳ್ಳುತ್ತಿತ್ತು—ಊಟಕ್ಕೆ ಕೂತಿದ್ದ ಯಜಮಾನರು ಯಾವಾಗ ಹೊರಗೆ ಬರುತ್ತಾರೋ ಎಂದು. ಪುಸ್ತಕವನ್ನು ಕೈಗೆ ಕೊಡುತ್ತಲೇ ಅಗಕ್ಕೆ ದಾರದಿಂದ ಕಟ್ಟಿದ್ದ ಸೀಸದ ಕಡ್ಡಿಯನ್ನು ತೆಗೆದುಕೊಂಡು ರುಜು ಮಾಡಿ "ಬಾರಣ್ಣಾ ಆ ಅಂಗಡಿತಾಕೆ. ಇಳ್ಳೇದೆಲೆ ಹಾಕಿ ಕೊಳ್ಳುವೆಯಂತೆ" ಎಂದನು.

"ಯಾಕೆ ಜೋಬಾಗಿಲ್ವ ನಾ ಹೋಗೋದಾರೀನೂ ಆದೇ. ಹೊಗ್ತಾ ಹಾಕ್ಕೊಂಡು ಹೋಗ್ತೀನಿ. ನಿನ್ನ ಹೆಸರೇನು ಸಿದ್ದಾನೆ".

"ಹೌದಣ್ಣಾ, ರುಜು ಸರಿಯಾಗೈತಾ ಬಾ ಹೋಗೋಣ. ನಿನ್ಯಾಕೆ ನಿಲ್ಲಿಸಿಕೊಳ್ಳಿ".

ಅಂಗಡಿಯಲ್ಲಿ ವಿಳ್ಳೇದೆಲೆ, ಸುಣ್ಣ, ಅಡಕೆ, ಕಡ್ಡಿಪುಡಿ ಎಲ್ಲಾ ತೆಗೆದು ಕೊಟ್ಟು "ಹೋಗಿ ಬರ್ತಿೀಯೇನಣ್ಣಾ" ಎಂದು ಸಿದ್ದನು ಕೆಂಪುರುಮಾಲಿ ನವನನ್ನು ಹೊರಡಲು ಪ್ರೋತ್ಸಾಹಿಸಿದನು.

"ಹೊರಡುತ್ತೇನಪ್ಪ. ಕಾಗದ ಜೋಕೆ" ಎಂದು ಹೇಳುತ್ತಾ ಹೊರಟ ಜವಾನನು ಕಣ್ಮರೆಯಾಗುವವರೆಗೂ ರಸ್ತೆಯಲ್ಲಿ ನಿಂತುಕೊಂಡು ಆತನನ್ನು ನೋಡುತ್ತಿದ್ದ. ಆತನು ಕಣ್ಮರೆಯಾಗುತ್ತಲೇ ಕಾಗದವನ್ನು ಅಂಗಿಯ

ಒಳಜೇಬಿನೊಳಗೆ ಇಟ್ಟು, ಒಳಗೆ ಹೋಗಿ ಊಟದ ಮನೆಯ ಬಾಗಿಲ ಹತ್ತಿರ ಶಬ್ದವನ್ನಾಲೈಸಿದನು. ಸೋಮಶರ್ಮರೂ, ಮಕ್ಕಳೂ, ಇನ್ನೂ ಊಟಮಾಡುತ್ತಲೇ ಇದ್ದರು. ಮಕ್ಕಳ ಗಲಾಟೆಯೋ ಗಲಾಟೆ. ಮೆಲ್ಲನೆ ತಾನು ಹಾಕಿದ್ದ ಬಾಗಿಲಿನ ಹೊರಚಿಲಕವನ್ನು ತೆಗೆದು ಸೋಮಶರ್ಮರ ಕೋಣೆಗೆ ಹೋಗಿ ಬಂದ ಕಾಗದಗಳನ್ನೆಲ್ಲಾ ಓದಿಯಾದ ಮೇಲೆ ಸಿಕ್ಕಿಸುತ್ತಿದ್ದ ಕಾಗದದ ಕಂಬಿಯನ್ನು ತೆಗೆದುಕೊಂಡು ಎಲ್ಲಕ್ಕೂ ಮೊದಲಿದ್ದ ಕಾಗದದ ತಳಭಾಗದಲ್ಲಿ ತನ್ನ ಸೀಸದಕಡ್ಡಿಯಿಂದ ಎರಡು ಕೆಂಪು ಗೆರೆಗಳನ್ನು ಎಳೆದು ಪುನಃ ಹೊರಗೆ ಬಂದು ಮಗುವನ್ನು ಆಡಿಸುವುದರಲ್ಲಿ ನಿರತನಾಗಿದ್ದನು. ಆದರೆ ಒಂದೆರಡು ಗಂಟೆಗಳ ಕೆಳಗೆ ಇದ್ದ ಸ್ವಚ್ಛ ಮನಸ್ಸು ಈಗ ಇರಲಿಲ್ಲ. ಮೊದಲು ಮಗುವಿನ ಹತ್ತಿರ ಇವನೂ ಒಂದು ಮಗುವಾಗಿ ಆಡುತ್ತಿದ್ದನು. ಈಗ ಅವನ ಕದಡಿದ ಮನಸ್ಸು ಮಗುವಿಗೂ ಭಾಸವಾಯಿತೋ ಏನೋ — ಅಳಲು ಪ್ರಾರಂಭಿಸಿತು. ಸಮಾಧಾನಮಾಡಲು ತಾನು ಕಲಿತಿದ್ದ — ಇತರ ಕಾಲಗಳಲ್ಲಿ ಅಳುತ್ತಿದ್ದ ಮಗುವನ್ನು ನಗುವಂತೆ ಮಾಡಿದ್ದ — ತಮಾಷೆಗಳನ್ನೆಲ್ಲಾ ಮಾಡಿದನು. ಪ್ರಯೋಜನವಾಗಲಿಲ್ಲ. ಮಗುವನ್ನು ಎತ್ತಿಕೊಂಡು ಓಡಾಡಲು ಪ್ರಾರಂಭಿಸಿದನು. ಮಗು ಸಂಪ್ರೀತವಾಗಲಿಲ್ಲ. ಒಳಗೆ ಊಟಕ್ಕೆ ಕೂತಿದ್ದ ಮಕ್ಕಳ ಗಲಾಟೆಯನ್ನು ಭೇದಿಸಿಕೊಂಡು ತಾಯಿಯ ಕಿವಿಗೆ ಮಗುವಿನ ಅಳು ಮುಟ್ಟಿರಬೇಕು. ಊಟದಮನೆಯ ಬಾಗಿಲನ್ನು ಸ್ವಲ್ಪ ತೆಗೆದು ಸೋಮಶರ್ಮರ ಪತ್ನಿಯು. “ಏಕೆ ಸಿದ್ದಾ, ಮಗು ಅಳುತ್ತದೆ. ಇನ್ನೊಂದು ಗಳಿಗೆ ಸುದಾರಿಸು. ಮಜ್ಜಿಗೆ ಹಾಕಿ ಬರುತ್ತೇನೆ” ಎಂದರು.

“ಆಗಲಿ ಅಮ್ಮಣ್ಣೀ. ನಿಧಾನವಾಗಿ ಬನ್ನಿ. ಸ್ವಲ್ಪ ತಿರುಗಾಡಿಸಿಕೊಂಡು ಬರುತ್ತೇನೆ” ಎಂದು ಹೇಳುತ್ತಾ ಅಂಗಡಿಗೆ ಇನ್ನೊಂದು ಸಾರಿ ಹೋಗಿ ಒಂದು ಚೂರು ಕಲ್ಲುಸಕ್ಕರೆ ಮಗುವಿನ ಬಾಯಲ್ಲಿ ಇಟ್ಟನು. ಕಲ್ಲುಸಕ್ಕರೆಯ ಸಿಹಿ ಅಳುವನ್ನು ತಡೆದು ಮಗುವಿನ ಮುಖದಲ್ಲಿ ಮುಗುಳ್ನಗೆ ಮೂಡಿಸಿತು. ಸಿದ್ದನ ಮನಸ್ಸಿನ ಕಹಿ ಮಾತ್ರ ಹಾಗೇ ಉಳಿಯಿತು.

೪

ಮಂಗಳವಾರ ಸೋಮಪುರದಲ್ಲಿ ಸಂತೆ. ಹುಡುಗ ಹುಡುಗಿಯರಿಗೆ ಆನಂದ. ಸಂತೆಯಲ್ಲಿ ಓಡಾಡಿ ಜೇಬಿನಲ್ಲಿದ್ದ ಪುಡಿಗಾಸುಗಳನ್ನು ಉಪಯೋಗಿಸಲು ಅಂದೇ ಅವಕಾಶ. ಊರಿನ ರೈತರೂ ಕೂಡ ಬೆಳಗಿನ ಕೆಲಸ —ಹೊಲ ಗದ್ದೆಗಳಲ್ಲಿ—ಮಾಡಿಕೊಂಡು ಊಟಮಾಡಿ ಶಾಲೆಯ ಜಗಲಿಯ ಮೇಲೆ ಸೇರುವುದು ಅವರ ಪದ್ಧತಿ. ಅವರವರಿಗೆ ತಿಳಿದುಬಂದ ಸಮಾಚಾರಗಳನ್ನೆಲ್ಲ ಅಲ್ಲಿ ಚರ್ಚಿಸುವರು. ರಂಗಪ್ಪನು ಹೊಲ ಮಾರಿದ್ದಕ್ಕೆ ಕಾರಣ, ಪತ್ರದಲ್ಲಿ ನಮೂದಿಸಿದ ಹಣಕ್ಕೂ ಕೈಗೆ ಬಂದ ಹಣಕ್ಕೂ ಇರುವ ವೆತ್ಯಾಸಕ್ಕೆ ಕಾರಣ, ಕೆಂಪನ ಬಿಳೀ ಹಸು ಕುಂಟುವುದಕ್ಕೆ ಔಷಧ, ಸೀನಪ್ಪನ ಹೆಂಡತಿಗೆ ಬರುವ ಛಳಿ ಜ್ವರಕ್ಕೆ ಔಷಧ ಕೊಡಲು ಸಮರ್ಥರಾದ ವೈದ್ಯರು, ಹರಕೆ ಹೊತ್ತುಕೊಳ್ಳಬಹುದಾದ ದೇವರು, ಇತ್ಯಾದಿ ವಿಷಯಗಳೆಲ್ಲಾ ಕೂಲಂಕಷವಾಗಿ ಅಲ್ಲಿ ವಿಮರ್ಶಿಸಲ್ಪಡುವುವು. ಇದು ನಡೆಯುತ್ತಿರುವ ಹೊತ್ತಿಗೆ ಆ ದಿನ ಹಳ್ಳಿಗಳಿಗೆ ಅಂಚೆ ತಲುಪಿಸುವವನು ಬರುವನು. ಹಳ್ಳಿಯ ಅಂಚೆಯವನೆಂದರೆ ಪಟ್ಟಣದಲ್ಲಿ ಮನೆ ಮನೆಗೂ ಪ್ರತಿದಿನವೂ ಕಾಗದಗಳನ್ನು ತಂದು ತಲುಪಿಸುವವನಂತಲ್ಲ. ಹಾಕುವ ಪೋಷಾಕು, ಮಾಡುವ ಕೆಲಸ ಒಂದೇ ಆದರೂ ರೀತಿ ಬೇರೆ. ಪಟ್ಟಣಿಗನು ಬಾಗಲಿಗೆ ಬಂದು 'ಟಪಾಲ್' ಎಂದು ಕೂಗಿ ಬಂದವರ ಕೈಗೆ ಕಾಗದಗಳನ್ನು ಕೊಟ್ಟು ಮುಂದಲ ಮನೆಯ ಕಾಗದಗಳನ್ನು ನೋಡಲು ಪ್ರಾರಂಭಿಸುವನು. ಹಿಂದಲ ಮನೆಯಲ್ಲಿ ಕಾದವನ್ನು ತೆಗೆದುಕೊಂಡವರು ಗಂಡಸರೇ ಹೆಂಗಸರೇ ಎಂದು ಯಾರಾದರೂ ಆತನನ್ನು ಕೇಳಿದರೆ ಹೇಳುವುದು ಆತನಿಗೆ ಕಷ್ಟವಾಗುತ್ತದೆ. ಹಾಗೆ ಆತನು ಕೂಗಿದಾಗ ಬರುವುದು ತಡವಾದರೆ ಕಾಗದಗಳನ್ನು ಕಿಟಕಿಯಲ್ಲೋ, ಬಾಗಿಲಲ್ಲಿ ಏನಾದರೂ ಸಂದು ಬಿಟ್ಟಿದ್ದರೆ ಆ ಸಂದಿನಲ್ಲೋ ಮನೆಯೊಳಕ್ಕೆ ನೂಕಿ ಹೊರಟುಬಿಡುತ್ತಾನೆ. ಹಳ್ಳಿಯ ಅಂಚೆಯವನು ಹಾಗಲ್ಲ. ಅವನು ಹಳ್ಳಿಗೇ ಒಬ್ಬ ನಂಟ. ಶಾಲೆಯ ಜಗುಲಿ ಅವನ ಕಛೇರಿ. ಆತನು ಬಂದ ವರ್ತಮಾನ ತಿಳಿಯುತ್ತಲೇ ಊರಿನ ಮುಖ್ಯಸ್ಥರೆಲ್ಲಾ ಅವನ ಸುತ್ತ ಸೇರುವರು. ಅವರವರ ಕಾಗದ ತಲಪಿಸುವುದು ಆತನ ಮೊದಲನೆಯ ಕೆಲಸ. ಎರಡನೆಯದು ಓದು ಬರಹ ಬಾರದಿದ್ದವರ

ಕಾಗದಗಳನ್ನು ಓದಿ ಅದರ ಅರ್ಥವನ್ನು ಸ್ಪಷ್ಟಪಡಿಸುವುದು. ಒಂದೊಂದು ಸಮಯದಲ್ಲಿ ಆ ತನ್ನ ಹಳ್ಳಿಯ ಮಿತ್ರರ ಗೃಹಕೃತ್ಯದ ವಿಷಯದಲ್ಲಿ ಸಲಹೆಗಳನ್ನು ಕೊಡುವ ಗೌರವವೂ ಈತನಪಾಲಿಗೆ ಬರುವುದು. ಮೂರನೆಯ ಕೆಲಸ ಹಳ್ಳಿಗರಿಗೆ ಬೇಕಾದ ಕಾರ್ಡು ಕವರುಗಳನ್ನು ವಿಕ್ರಯಿಸುವುದು. ಸಾಮಾನ್ಯವಾಗಿ ಇವುಗಳನ್ನು ಭರ್ತಿಮಾಡಿ ವಿಳಾಸ ಬರೆದು ಹಾಕುವುದೂ ಈತನ ಪಾಲಿಗೇ ಮೀಸಲು. ಇಷ್ಟೆಲ್ಲಾ ಆದಮೇಲೆ ಪಟ್ಟಣದಲ್ಲಿಯ ವರ್ತಮಾನಗಳು; ಇತರ ಹಳ್ಳಿಗಳ ವಿಶೇಷ ಘಟನೆಗಳು ಇವುಗಳ ಚರ್ಚೆ. ಆದಿನದ ಊಟ ಉಪಚಾರಗಳು ಈತನಿಗೆ ಹಳ್ಳಿಯ ಗೌಡನ ಮನೆಯಲ್ಲಿ. ಮಾರನೆಯ ಬೆಳಿಗ್ಗೆ ಮುಂದಿನ ಊರಿಗೆ ಪ್ರಯಾಣ ಮಾಡುವಾಗ ಚೀಲದಲ್ಲಿ ಕಾಗದಗಳ ಜೊತೆಗೆ ಹಳ್ಳಿಗರು ಕೊಟ್ಟ ತರಕಾರಿ, ವಿಳ್ಳೇದೆಲೆಯ ಕಟ್ಟುಗಳು.

ಆದರೆ ಸೋಮಪುರದಲ್ಲಿ ಈತನ ಕೆಲಸ ಸ್ವಲ್ಪ ಕಡಿಮೆ. ಇದಕ್ಕೆ ಕಾರಣರು ಮಠದಯ್ಯನವರಾದ ಶಿವರಾಮಯ್ಯನವರು. ಕಾಗದಗಳನ್ನು ಓದುವುದು ಉತ್ತರ ಬರೆಯುವುದು ಅವರ ಪಾಲಿನ ಕೆಲಸಗಳಾಗಿದ್ದವು. ಶಿವರಾಮಯ್ಯನವರಿಗೆ ಆ ಹಳ್ಳಿಯಲ್ಲಿ ಗೊತ್ತಿರದ ಸಂಸಾರವಾಗಲೀ, ಸಂಸಾರದ ಗುಟ್ಟಾಗಲಿ ಇರಲಿಲ್ಲ. ಯಾರಿಗೆ ಏನು ಕಷ್ಟಬಂದರೂ ಶಿವ ರಾಮಯ್ಯನವರಲ್ಲಿ ಬಂದು ಹೇಳಿಕೊಳ್ಳುವರು. ಇಬ್ಬರಿಗೆ ಮನಸ್ತಾಪಬಂದರೆ ಇಬ್ಬರೂ ಇವರ ಸಲಹೆ ಕೇಳಲು ಬರುವರು. ಅಯ್ಯನವರ ಮಾತಿನಲ್ಲಿ ಅವರು ಕೊಡುತ್ತಿದ್ದ ಸಲಹೆಗಳಲ್ಲಿ ನಂಬಿಕೆ ಬಹಳ. ಕೆಡುಕಾಗುವಂತಹ ಸಲಹೆಗಳನ್ನು ಕೊಟ್ಟದ್ದಾಗಲಿ ಇಬ್ಬರ ಜಗಳವನ್ನು ಹೆಚ್ಚು ಮಾಡಿದ್ದಾಗಲಿ ಅವರಲ್ಲಿ ಕಂಡು ಬಂದಿರಲಿಲ್ಲ. ಅವರು ಆ ಹಳ್ಳಿಗೆ ಬಂದು ನೆಲಸಿದಾರಭ್ಯ ಹಳ್ಳಿಯಲ್ಲಿದ್ದ ಸಣ್ಣಪುಟ್ಟ ಕಲಹಗಳು ಮಾಯವಾಗಿ ಊರಿನಲ್ಲಿ ಶಾಂತಿ ನೆಲಸಿದ್ದಿತು. ಬೀದಿಗಳಲ್ಲಿ ಬೆತ್ತಲೆ, ಅರಬೆತ್ತಲೆ, ಇಲ್ಲವೆ ಕೊಳೆ ಯಿಂದ ತುಂಬಿದ ಬಟ್ಟೆಗಳನ್ನು ಹಾಕಿಕೊಂಡು ಒಬ್ಬರನ್ನೊಬ್ಬರು ಅಶ್ಲೀಲ ಮಾತುಗಳಿಂದ ಬೈದಾಡುತ್ತಿದ್ದ ಹುಡುಗ ಹುಡುಗಿಯರ ಚಿತ್ರವು ಅಪೂರ್ವ ವಾಗಿತ್ತು. ಅಯ್ಯನವರು ಬಂದ ಒಂದು ವರುಷದೊಳಗಾಗಿ ಹಳ್ಳಿಯ ಮಕ್ಕಳೆಲ್ಲರೂ ಯಾವರೀತಿಯ ಬಲವಂತವೂ ಇಲ್ಲದೆ ಮಠದ ವಿದ್ಯಾರ್ಥಿ ಗಳಾದರು. ಇದಕ್ಕೆ ಕಾರಣ ಶಿವರಾಮಯ್ಯನವರಿಗೆ ಮಕ್ಕಳಮೇಲಿದ್ದ

ಸ್ನೇಹಜನಾದ ಮಮತೆ, ತಾಳ್ಮೆ. ಅವರ ಬಾಯಿಂದ ಕಠಿಣವಾದ ಮಾತು ಗಳಾಗಲಿ ಸ್ನೇಹಿಯಿಂದ ಪೆಟ್ಟುಗಳಾಗಲಿ ಮಕ್ಕಳ ಪಾಲಿಗೆ ಬಂದ ದಿನವಿರಲಿಲ್ಲ. ಮಕ್ಕಳಿಗೆ ಅವುಗಳಮನೆಯಲ್ಲಿ ಕಳೆಯುವ ಕಾಲಕ್ಕಿಂತಲೂ ಶಾಲೆಯಲ್ಲಿ ಕಳೆಯುವ ಕಾಲವೇ ಹೆಚ್ಚು ಆನಂದ ದಾಯಕವಾಗಿರುತ್ತಿತ್ತು. ಆದರಿಂದಲೇ ನಗು ನಗುತ್ತಾ ಉತ್ಸಾಹವನ್ನು ಸೂಸುತ್ತ ಹೊತ್ತಿಗೆ ಸರಿಯಾಗಿ ಎಲ್ಲರೂ ಶಾಲೆಗೆ ಬರುತ್ತಿದ್ದರು.

ಶಿಷ್ಯಜನ ದೊಡ್ಡ ಹುಡುಗಿಯರನ್ನು ಒಟ್ಟಿಗೆ ಸುಧಾರಿಸುವುದು ಕಷ್ಟವೆಂದು ಅವರನ್ನು ಎರಡು ಗುಂಪುಗಳಾಗಿ ವಿಭಾಗಿಸಿದ್ದರು. ಒಂದನೆಯ ಗುಂಪು ಹತ್ತುವರ್ಷಕ್ಕೆ ಮೇಲ್ಪಟ್ಟವರದು. ಎರಡನೆಯದು ಹತ್ತುವರ್ಷದ ಒಳಗಿರತಕ್ಕವರದು. ಮೊದಲನೆಯ ಗುಂಪು ಸೂರ್ಯೋದಯವಾದಮೇಲೆ ಬಂದು ಸುಮಾರು ಹನ್ನೊಂದು ಗಂಟೆಯವರೆಗೂ, ಎರಡನೆಯದು ಸುಮಾರು ಮಧ್ಯಾಹ್ನ ಮೂರು ಗಂಟೆಗೆ ಬಂದು ಸೂರ್ಯನು ಮುಳುಗುವ ವರೆಗೂ ಇರುತ್ತಿದ್ದವು. ಪ್ರತಿಯೊಂದು ಗುಂಪೂ ಶಾಲೆಗೆ ಬಂದೊಡನೆಯೇ ಪ್ರಾರ್ಥನೆ. ಅನಂತರ ಗುಂಪು ಮೂರು ಸಣ್ಣ ಗುಂಪುಗಳಾಗಿ ವಿಭಾಗಿಸಲ್ಪಡುತ್ತಿತ್ತು. ಒಂದನೆಯ ಸಣ್ಣಗುಂಪು ಹಿಂದಿನದಿನ ಕಲಿತ ಪಾಠವನ್ನು ಓದಿಕೊಳ್ಳುವುದು ಎರಡನೆಯದು ಎರಡು ದಿನಗಳಹಿಂದೆ ಕಲಿತ ಪಾಠವನ್ನು ಕಪ್ಪು ಹಲಗೆಯ ಮೇಲೆ ಬರೆಯುವುದು, ಮೂರನೆಯದು ಲೆಕ್ಕಗಳನ್ನು ಮಾಡುವುದು. ಗಣಿತದ ಗುಂಪಿಗೆ ಲೆಕ್ಕಮಾಡುವ ವಿಧಾನವನ್ನು ತೋರಿಸಿಕೊಟ್ಟು ಓದು ವವರು ಸರಿಯಾಗಿ ಓದುತ್ತಿದ್ದಾರೆಯೇ ನೋಡಿ ಅನಂತರ ಬರವಣಿಗೆ ಗುಂಪಿನವರು ಬರೆದಿಟ್ಟಿರುವುದನ್ನು ಪರೀಕ್ಷಿಸುವುದು, ನಿಯಮಿತ ಭಾಗವು ಮುಗಿದಮೇಲೆ ಗುಂಪಿನ ಕಾರ್ಯಕ್ರಮಗಳನ್ನು ಬದಲಾಯಿಸುವುದು. ಮಕ್ಕಳನ್ನು ಶಾಲೆಯಿಂದ ಮನೆಗೆ ಕಳುಹಿಸುವ ಅರ್ಧಗಂಟೆ ಮುಂಚೆ ಪುರಾಣ ಗಳಿಂದ ಯಾವುದಾದರೂ ಒಂದು ಕಥೆಯನ್ನು ಆಯ್ದುಕೊಂಡು ಮಕ್ಕಳ ಮನಸ್ಸಿಗೆ ಹಿಡಿಯುವಂತೆ ಹೇಳುವುದು. ಇಷ್ಟು ಶಿವರಾಮಯ್ಯನವರ ನಿತ್ಯದ ಶಾಲೆಯ ಕೆಲಸ. ಪ್ರತಿದಿನವೂ ಕೇಳುತ್ತಿದ್ದ ಪುರಾಣದ ಕತೆಗಳು ಶಿವ ರಾಮಯ್ಯನವರ ಆದರ್ಶ ಜೀವನವೂ ಮಕ್ಕಳ ನೈತಿಕ ಜೀವನದ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿ ದೈವಭಕ್ತಿಯನ್ನೂ ಒಳ್ಳೆಯ ನಡತೆಯನ್ನೂ

ಅವರಲ್ಲುಂಟುಮಾಡಿದ್ದುವು. ಮಕ್ಕಳನ್ನು ಎರಡು ಗುಂಪಾಗಿ ಮಾಡಿದ್ದ ಏರ್ಪಾಟು ಹಳ್ಳಿಯವರಿಗೂ ಬಹಳ ಅನುಕೂಲವಾಗಿದ್ದವು. ಶಾಲೆಮುಗಿದ ಮೇಲೆ ಇಲ್ಲವೆ ಶಾಲೆಗೆ ಹೋಗುವುದಕ್ಕೆ ಮುಂಚೆ ಅವರು ಮನೆಯಕೆಲಸನಲ್ಲಿ ಇಲ್ಲವೆ ಹೊಲ ಗದ್ದೆಗಳ ಕೆಲಸದಲ್ಲಿ ತಂದೆ ತಾಯಿಗಳಿಗೆ ನೆರವಾಗಲು ಅವಕಾಶವಿರುತ್ತಿತ್ತು.

ಟಾನಸ್ಪೆಕ್ಟರವರು ನೋಮಪುರಕ್ಕೆ ಬಂದು ಹೋಗಿ ನಾಲ್ಕು ದಿನಗಳಾದುವು. ಇಂದು ಮಂಗಳವಾರ ಪದ್ಧತಿಯ ಪ್ರಕಾರ ಊರಿನ ಮುಖ್ಯಸ್ಥರೆಲ್ಲರೂ ಶಾಲೆಯ ಜಗುಲಿಯ ಮೇಲೆ ಸೇರಿದ್ದರು. ಅಂಚೆಯ ಹನುಮಯ್ಯನು ಕೆಂಪು ಅಂಚಿನ ಧೋತ್ರ, ಕಾಕಿಕೋಟು, ರುಮಾಲುಗಳನ್ನು ಹಾಕಿಕೊಂಡು ಬಗಲಲ್ಲಿ ಕಾಗದಗಳ ಚೀಲವನ್ನು ನೇತಾಡಿಸುತ್ತಾ ಕಂಕುಳಲ್ಲಿ ಛತ್ರಿಯನ್ನು ಇರುಕಿಸಿಕೊಂಡು ಬಂದನು. ಆತನನ್ನು ಕಂಡೊಡನೆ ಪಟೇಲನು "ಬಾ ಹನುಮಣ್ಣ, ಕುಂತುಕೋ, ಊಟ ತೀರಿಸಿದೆಯಾ" ಎಂದನು. ಊಟ ಆಗಿದೆಯೆಂದು ಹೇಳುತ್ತಾ ಹನುಮಯ್ಯನು ಜಗುಲಿಯ ಮೇಲೆ ಹತ್ತಿ ಗೋಡೆಗೆ ಒರಗಿಕೊಂಡು ಛತ್ರಿಯನ್ನು ಜೋಪಾನವಾಗಿ ಮೂಲೆಗಿಟ್ಟು ಕಾಗದಗಳ ಗಂಟನ್ನು ಬಿಚ್ಚಿ ವಿಳಾಸಗಳನ್ನು ನೋಡಲು ಪ್ರಾರಂಭಿಸುತ್ತಲೇ "ನಂಗೇನಾದರೂ ಐತಾ, ನಂಗೇನದರೂ ಐತಾ," ಎಂದು ಹಳ್ಳಿಯವರು ಸುತ್ತಲೂ ಮುತ್ತಿಕೊಂಡರು. ಹನುಮಯ್ಯನು "ಸ್ವಲ್ಪ ತಾಳಿರಣ್ಣ ಸ್ವಲ್ಪ ತಾಳಿರಣ್ಣ" ವಿಳಾಸಗಳನ್ನು ನೋಡಿ ಅವರವರ ಕಾಗದಗಳನ್ನು ಅವರವರಿಗೆ ಕೊಟ್ಟು, ಅಲ್ಲಿಗೆ ಬಾರದಿದ್ದವರ ಕಾಗದಗಳನ್ನು ಅವರ ಪಕ್ಕದ ಮನೆ ಯವರ ಇಲ್ಲವೇ ಸ್ನೇಹಿತರ ಇಲ್ಲವೇ ನಂಟರ ವಶಕ್ಕೆ ಕೊಟ್ಟು "ಅಯ್ಯನವರು ಎಲ್ಲಿ" ಎಂದನು.

ದೂರದಲ್ಲಿ ಒಂದುಕಡೆ ಮುದುಕನೊಬ್ಬನ ಕೂಡೆ ಮಾತನಾಡುತ್ತಿದ್ದ ಶಿವರಾಮಯ್ಯನವರು "ಏಕೆ ಹನುಮಯ್ಯ, ಯಾವುದಾದರೂ ವಿಳಾಸವನ್ನು ಓದಬೇಕೆ" ಎಂದು ಕೇಳಿದರು.

"ಇಲ್ಲ ಬುದ್ಧಿ, ತಮಗೊಂದು ರಿಜಿಸ್ಟರ್ ಕಾಗದ ಇದೆ. ಇದಕ್ಕೆ ತಾವು ರುಜು ಮಾಡಬೇಕು" ಎಂದು ಹೇಳುತ್ತಾ ಹನುಮಯ್ಯನು ಒಂದು

ಲಕ್ಕೋಟೆಯನ್ನೂ, ಚೀಟಿಯನ್ನೂ ತೆಗೆದುಕೊಂಡು ಶಿವರಾಮಯ್ಯನವರ ಬಳಿಗೆ ಬಂದನು.

ರಿಜಿಸ್ಟರು ಕಾಗದ ಸೋಮಪುರದವರಿಗೆ ಬಹಳ ಕುತೂಹಲಕ್ಕೆ ಕಾರಣವಾದ ವಿಷಯ. ಸಾಧಾರಣವಾಗಿ ಅಂತಹ ಕಾಗದಗಳು ಆಗಾಗ್ಗೆ ಬರುತ್ತಿದ್ದಾಗ, ಅವುಗಳನ್ನು ತೆಗೆದುಕೊಳ್ಳುವುದಕ್ಕೆ ಮುಂಚೆ ಎಲ್ಲಿಂದ ಯಾರಿಂದ ಬಂದಿರುವುದೆಂಬುದನ್ನು ತಿಳಿದು ವಿಜಯಪುರಕ್ಕೆ ಹೋಗಿ ವಕೀಲರನ್ನು ಕಂಡು ಮಾತನಾಡಿ ನಂತರ ತೆಗೆದುಕೊಂಡ; ತೆಗೆದು ಕೊಳ್ಳಲು ತಿರಸ್ಕರಿಸಿದ ಸಂದರ್ಭಗಳು ಹಲವರ ಜ್ಞಾಪಕದಲ್ಲಿದ್ದುವು. ಈಚೆಗೆ ಅಂತಹ ಸಂದರ್ಭಗಳು ಶಿವರಾಮಯ್ಯನವರ ಪ್ರಭಾವದಿಂದ ಬಹಳ ಕಡಿಮೆಯಾಗಿದ್ದವು. ಅಯ್ಯನವರಿಗೇ ಅಂತಹ ಕಾಗದ ಬಂದದ್ದು ಎಲ್ಲರಿಗೂ ಕುತೂಹಲವನ್ನು ಹೆಚ್ಚಿಸಿತು. ಪಟೀಲನು "ಹನುಮಣ್ಣ ಸ್ವಲ್ಪ ತಡಿ. ಕಾಗದ ಎಲ್ಲಿಯದು. ಯಾರು ಕಳುಹಿಸಿರುವರು. ತುಸ ತಿಳಿಸು, ಆಮೇಲೆ ರುಜು ತೆಗೆದುಕೊಳ್ಳುವೆಯಂತೆ" ಎಂದನು.

ಶಿವರಾಮಯ್ಯನವರು ಕಾಗದವನ್ನು ಕೈಗೆ ತೆಗೆದುಕೊಂಡು ಮುಗುಳ್ನಗೆ ನಗುತ್ತಾ "ಯೋಚನೆ ಮಾಡಬೇಕಾದ ಕೆಲಸವಿಲ್ಲ. ಪಟೀಲರೇ! ಇದು ವಕೀಲರಿಂದಾಗಲಿ ಕೋರ್ಟಿನಿಂದಾಗಲಿ ಬಂದಿಲ್ಲ. ಈಗ ನಾಲ್ಕೈದು ದಿನಗಳ ಕೆಳಗೆ ನಡುರಾತ್ರಿ ಪಾದ್ರಿಯೊಬ್ಬರು—ಅವರ ಮೋಟಾರು ನಮ್ಮ ಹಳ್ಳಿಯ ಹತ್ತಿರ ಕೆಟ್ಟುಹೋಗಿದ್ದುದರಿಂದ ಅದನ್ನು ಸರಿಪಡಿಸಲು—ನಮ್ಮ ಮನೆಗೆ ಬಂದು ಲಾಂದರ ತೆಗೆದುಕೊಂಡು ಹೋಗಿದ್ದರು. ಅವರು ಬರೆದಿರುವ ಕಾಗದ" ಎಂದರು.

ರುಜುಮಾಡಿ ಕಾಗದ ತೆಗೆದುಕೊಂಡು ಒಡೆದು ಒಳಗಿನ ಕಾಗದವನ್ನು ಈಚೆಗೆ ತೆಗೆದದ್ದಾಯಿತು. ಕಾಗದಕ್ಕೆ ಹತ್ತುರೂಪಾಯಿನ ಒಂದು ನೋಟನ್ನು ಗುಂಡು ಸೂಜಿಯಿಂದ ಚುಚ್ಚಿತ್ತು. ಅದನ್ನು ತೆಗದು ಕೆಳಗಿಟ್ಟು ಶಿವರಾಮಯ್ಯನವರು ಕಾಗದವನ್ನು ಓದಲು ಪ್ರಾರಂಭಿಸಿದರು. ಹಳ್ಳಿಯವರು ಅವರ ಮುಖವನ್ನೇ ನೋಡುತ್ತಾ ಅಲ್ಪ ಸ್ವಲ್ಪ ಸಂತೋಷದ

ಚಿಹ್ನೆಗಳು ಅಲ್ಲಿಕಂಡು ಬರುತ್ತಲೇ ಸಮಾಧಾನವನ್ನು ತಂದುಕೊಂಡು ಅಯ್ಯನವರು ಕಾಗದವನ್ನು ಮುಗಿಸುವುದನ್ನೇ ಎದುರುನೋಡುತ್ತಿದ್ದರು.

ಕಾಗದ ಓದಿ ಕೆಳಗಿಡುತ್ತಲೇ ಪಟೇಲನು "ಇದೇನು ಸ್ವಾಮಿ, ರಿಜಿಸ್ಟ್ರು. ಬರೀಕಾಗದ ಹಾಕಬಹುದಾಗಿತ್ತಲ್ಲ" ಎಂದನು.

"ಹತ್ತು ರೂಪಾಯಿನ ನೋಟು ಇಟ್ಟಿದ್ದಾರೆ. ಅದಕ್ಕಾಗಿ ರಿಜಿಸ್ಟ್ರು ಮಾಡಿದ್ದಾರೆ. ಕಾಗದದಲ್ಲಿ ಹೆಚ್ಚಿನ ಸಂಗತಿಗಳೇನೂ ಇಲ್ಲ. ಹನುಮಯ್ಯ ಇದನ್ನು ಎಲ್ಲರೂ ಕೇಳುವಂತೆ ಗಟ್ಟಿಯಾಗಿ ಓದಿಹೇಳುತ್ತೀಯಾ ?" ಎಂದು ಶಿವರಾಮಯ್ಯನವರು ಕಾಗದವನ್ನು ಆತನ ಕೈಗೆ ಕೊಟ್ಟರು. ಹನುಮಯ್ಯನು ಓದಲಾರಂಭಿಸಿದನು.

"ಪ್ರಿಯ ಮಿತ್ರರೇ, ಮಿತ್ರರೆಂದು ನಿಮ್ಮನ್ನು ನಾನು ಕರೆಯಬಹುದೆಂದು ತಿಳಿಯುತ್ತೇನೆ. ಯಾರೊಡನೆಯಾದರೂ ಏಳು ಹೆಜ್ಜೆ ನಡೆದರೆ ಅವರು ಸ್ನೇಹಿತರು ಎಂಬ ನಂಬಿಕೆ ಹಿಂದುಗಳಲ್ಲಿ ಇದೆಯೆಂದು ನನ್ನ ಮುನ್ಷಿಯವರು ಹೇಳಿದ್ದರು. ಆ ರಾತ್ರಿ ನೀವು ನನ್ನೊಡನೆ ಸಾವಿರಾರು ಹೆಜ್ಜೆ ನಡೆದಿರುವುದರಿಂದ ನಾವಿಬ್ಬರೂ ಸ್ನೇಹಿತರಲ್ಲವೆ ? ನಿಮ್ಮೂರಿಂದ ಹೊರಟಮೇಲೆ ಯಾವ ತೊಂದರೆಯೂ ಇಲ್ಲದೆ ವಿಜಯಪುರಕ್ಕೆ ಬಂದೆವು. ಬಡಪಾಯಿ ನಮ್ಮ ಅಡುಗೆಯ ಡೇವಿಡ್ಡು ಅಡಿಗೆ ಸಿದ್ಧಮಾಡಿಕೊಂಡು ಕಾದಿದ್ದ. ನಾವು ಸರಿಯಾಗಿ ಊಟಮಾಡಲಿಲ್ಲ. ಅಡಿಗೆ ಕೆಟ್ಟುಹೋಗಿರಬೇಕೆಂದು ತಿಳಿದು ಅವನ ಮುಖ ಪೆಚ್ಚಾಯಿತು. ಲಿಲ್ಲಿಯು ನಿಮ್ಮ ಮನೆಯ ಸವಿತಿಂಡಿ ಹಣ್ಣು ಹಾಲುಗಳ ಸಂಗತಿ ತಿಳಿಸಿದ ಮೇಲೆ ಅವನಿಗೆ ಸಮಾಧಾನವಾಯಿತು. ಈ ವಿಷಯ ನಿಮ್ಮ ಪತ್ನಿಯವರಿಗೂ ನಮ್ಮ ಕೃತಜ್ಞತಾಪೂರ್ವಕವಾದ ವಂದನೆಯೊಡನೆ ದಯವಿಟ್ಟು ತಿಳಿಸಿರಿ.

ನನ್ನ ಪರಿಚಯ ತಮಗೆ ತಿಳಿಸುವಾಗ ಒಂದು ವಿಷಯ ಹೇಳುವುದು ಮರೆತೆ. ನಾನು ಕ್ರೈಸ್ತಮತವನ್ನು ಬೋಧಿಸುವುದರ ಜೊತೆಗೆ ನಮ್ಮ ಮಿಶನ್ನಿನವರು ಇಟ್ಟಿರುವ ಮುದ್ರಾಶಾಲೆಯ ಮೇಲ್ವಿಚಾರಣೆಯ ಕೆಲಸವನ್ನು

ಮಾಡುತ್ತೇನೆ. ಮುದ್ರಣಶಾಲೆಯಲ್ಲಿ ನಮ್ಮ ಮತ ಸಂಬಂಧವಾದ ಪುಸ್ತಕಗಳನ್ನು ಕನ್ನಡದಲ್ಲಿ ಅಚ್ಚುಹಾಕುವುದಲ್ಲದೆ ಪ್ರತಿವರ್ಷವೂ ಒಂದೊಂದು ಒಳ್ಳೆಯ ಕನ್ನಡ ಗ್ರಂಥವನ್ನು ಮುದ್ರಿಸುವ ಪದ್ಧತಿಯಿದೆ. ಗ್ರಂಥದ ಯೋಗ್ಯತೆಯನ್ನು ನಿಷ್ಕರ್ಷಿಸುವ ಶಕ್ತಿ ನಮಗೆ ಇಲ್ಲವಾದ್ದರಿಂದ ಪುಸ್ತಕದ ಹಸ್ತಪತ್ರಿಕೆಯನ್ನು ವಿಜಯಪುರದ ಪಂಡಿತಶ್ರೇಷ್ಠರೊಬ್ಬರಲ್ಲಿ ಕೊಟ್ಟು ಅವರು ಅದು ಕನ್ನಡಭಾಷಾರತ್ನ ಭಂಡಾರಕ್ಕೆ ಸೇರಲು ಅರ್ಹವಾದದ್ದೆಂದು ಅಭಿಪ್ರಾಯಕೊಟ್ಟರೆ ಮುದ್ರಣದ ಕೆಲಸ ನಾವು ನಿರ್ವಹಿಸುವೆವು. ಈಗ ವಿಚಾರಿಸಿದ್ದರಲ್ಲಿ ಈ ವರ್ಷ ಸರಿಯಾದ ಗ್ರಂಥವಾವುದೂ ಸಿಕ್ಕದಿರುವುದರಿಂದ ಇನ್ನೂ ಯಾವುದನ್ನೂ ಪ್ರಕಟಿಸಿಲ್ಲವೆಂದು ತಿಳಿಯಿತು. ಆಗ ನನಗೆ ತಮ್ಮ ಗ್ರಂಥದ ಜ್ಞಾಪಕ ಬಂದಿತು. ತಮ್ಮನ್ನು ನೋಡಿದ ಮೇಲೆ ತಮ್ಮ ಗ್ರಂಥದ ವಿಚಾರದಲ್ಲಿ ಯಾವ ಅಭಿಪ್ರಾಯ ಬರಬಹುದೆಂದು ಹೇಳಬೇಕಾಗುದಿಲ್ಲ. ನಮ್ಮ ಮುದ್ರಣಾಲಯದ ನಿಯಮದ ಪ್ರಕಾರ ತಮ್ಮ ಪ್ರಯಾಣದ ಖರ್ಚಿಗಾಗಿ ಸ್ವಲ್ಪ ಹಣ ಇಟ್ಟಿದೇನೆ. ಸಾಲದೇ ಬಂದರೆ ತಾವು ಇಲ್ಲಿಗೆ ಬಂದಾಗ ಕೊಡುತ್ತೇನೆ. ತಮ್ಮ ಗ್ರಂಥದೊಡನೆ ಇಲ್ಲಿಗೆ ಬಂದರೆ ಗ್ರಂಥಾವಲೋಕನಮಾಡಿಸಿ ಅಭಿಪ್ರಾಯ ಪಡೆದು ಅಚ್ಚುಹಾಕಿ ಪ್ರಕಟಿಸಲು ತಾವು ಮುದ್ರಣಾಲಯಕ್ಕೆ ಹಾಕಬಹುದಾದ, ಮುದ್ರಣಾಲಯವು ತಮಗೆ ವಿಜ್ಞಾಪಿಸಿಕೊಳ್ಳ ಬಹುದಾದ ಷರತ್ತುಗಳನ್ನು ಚರ್ಚಿಸಿ ಎಲ್ಲವೂ ತಮ್ಮ ಮನಸ್ಸಿಗೆ ಸಮಾಧಾನವಾದರೆ ಗ್ರಂಥವನ್ನು ಮುದ್ರಿಸಿ ಪ್ರಕಟಿಸುವ ಕೆಲಸವನ್ನು ನಮ್ಮ ಸ್ವಂತ ಖರ್ಚಿನಿಂದ ನಿರ್ವಹಿಸುತ್ತೇವೆ. ಈ ವರ್ಷ ಸರಿಯಾದ ಗ್ರಂಥ ಸಿಕ್ಕದೆ ತವಕಪಡುತ್ತಿರುವ ನಮಗೆ ತಮ್ಮ ಗ್ರಂಥವನ್ನು ಬೆಳಕಿಗೆ ತರುವ ಅವಕಾಶವನ್ನು ಕೊಟ್ಟು ಉಪಕಾರ ಮಾಡಬೇಕಾಗಿ ಬೇಡುತ್ತೇನೆ.

ತಾವು ಬರುವ ದಿನ, ಬರುವ ರೈಲು ತಿಳಿಸಿದರೆ ನನಗೂ ತಮಗೂ ಸ್ನೇಹಕ್ಕೆ ಕಾರಣವಾದ ನನ್ನ ಮುರುಕಲು ಮೋಟಾರಿನೊಡನೆ ಸ್ಟೇಷನ್ನಿಗೆ ಬರುತ್ತೇನೆ. ಅಕಸ್ಮಾತ್ತಾಗಿ ನನ್ನ ಮೋಟಾರಿನ ತಪ್ಪಿನಿಂದ ನಾವಿಬ್ಬರೂ ಸ್ಟೇಷನ್ನಿನಲ್ಲಿ ಸಂಧಿಸದಿದ್ದರೆ ನನ್ನ ಮನೆಗೆ ಬರುವ ದಾರಿಯು ಹೀಗೆ— ಸ್ಟೇಷನ್ನಿನಿಂದ ಹೊರಟರೆ ಒಂದು ದೊಡ್ಡರಸ್ತೆ ಪೂರ್ವಕ್ಕೆ ಹೋಗುತ್ತದೆ. ಅದರಲ್ಲಿ ಸುಮಾರು ನೂರೈವತ್ತು ಗಜ ಹೋದರೆ ಒಂದು ವೃತ್ತ ಸಿಕ್ಕುತ್ತದೆ.

ಅಲ್ಲಿಂದ ಪೂರ್ವಕ್ಕೆ ಹೋಗುವ ದಾರಿಯಲ್ಲೇ ಸುಮಾರು ಇನ್ನೂರು ಗಜಗಳು ಹೋದರೆ ಇನ್ನೊಂದು ವೃತ್ತ ಸಿಕ್ಕುತ್ತದೆ. ಅಲ್ಲಿಂದ ಈಶಾನ್ಯ ದಿಕ್ಕಿಗೆ ಹೋಗುವ ದಾರಿಯಲ್ಲಿ ಸುಮಾರು ನಲವತ್ತು ಗಜ ಹೋದರೆ ರಸ್ತೆಯ ಎಡಗಡೆಯ ಮನೆ ನಾನು ವಾಸಮಾಡುವ ಸ್ಥಳ. ಮನೆಯ ಆವರಣದಲ್ಲಿ ಹೂವಿನ ಗಿಡಗಳಿವೆ.

ನನ್ನ ಪತ್ನಿಯು ಅವರ ನಮಸ್ಕಾರವನ್ನು ತಮಗೂ ತಮ್ಮ ಪತ್ನಿಯವರಿಗೂ ತಿಳಿಸಿ, ತಾವು ಗ್ರಂಥದೊಡನೆ ಖಂಡಿತ ಬರಬೇಕೆಂದು ಪ್ರಾರ್ಥಿಸುತ್ತಾರೆ.

ತಮ್ಮ ಕಾಗದವನ್ನು ಎದುರುನೋಡುತ್ತಿರುವ, ತಮ್ಮ ವಿಶ್ವಾಸಿ, ಹೆಂಡ್ರಿಕ್ಸ್ ಟಾನಸ್ಲೇ.

ಕಾಗದವನ್ನು ಓದುತ್ತಿದ್ದಾಗ ನಿಶ್ಶಬ್ದವಾಗಿತ್ತು. ಓದಿದ್ದು ಮುಗಿಯುತ್ತಲೇ ಒಬ್ಬೊಬ್ಬರು ಒಂದೊಂದು ರೀತಿ ಮಾತಾಡಲು ಪ್ರಾರಂಭಿಸಿದರು. ಪಟೇಲನು "ಒಳ್ಳೇದು ಅಯ್ಯನೋರೆ. ಹೋಗಿಬಿಟ್ಟು ಬನ್ನಿ. ಆದರೆ ಒಂದು ಅಡಿಕೇಮರ ಹೋದರೆ ಒಂದು ಅಡಿಕೇಗೋಟು. ಆದರೆ ಷರತ್ತುಹಾಕುವಾಗ ಯಾರಾದರೂ ಲಾಯರಿಕೇಳಿ ಹಾಕಬೇಕು" ಅಂದನು.

ಪೂಜಾರಿ ರಂಗಯ್ಯನು "ಈ ಈರೋಪಿನೋರೆಲ್ಲಾ............ಂಡರು. ಇದರಾಗೆ ಅವನಿಗೇನೋ ಲಾಭ ಅದೆ. ಅದ್ಕೇ ಬರದವ್ನೆ. ಹೋಗ್ಬೇಡಿ ಅಯ್ಯನೋರೆ" ಎಂದನು.

ಚಿಲ್ಲರೆ ಅಂಗಡಿ ಗಂಗನು "ಪುಸ್ತಕದಾಗೆ ಅವನಿಗೇನೋ ಲಾಭ?"

ಪೂಜಾರಿ ರಂಗ—ಹೋಗೋ ಮಂಕೇ. ಪುಸ್ತಕದಾಗೇ ಎಲ್ಲಾ ಇರೋದು. ಕೇಳಿಲ್ವಾ ನೀನು? ಜರ್ಮನಿಯೋನು ನಮ್ಮ ವೇದಾ ಎಲ್ಲಾ ತಗೊಂಡ್ಹೋಗಿ ಯಂತ್ರಾ, ಯೇರೋಪ್ಲೇನು ಎಲ್ಲಾ ಮಾಡ್ತಿರೋದು! ಹಾಗೆ ಈ ಲ............ಗ ಅಯ್ಯನೋರ ಪುಸ್ತಕದಾಗೆ ಏನೋ ನೋಡವ್ನೆ. ಅದಕ್ಕೇ ಈ ಪುಸಲಾಯಿಸೋ ಕಾಗದ.

ಶಿವರಾಮಯ್ಯ—ರಂಗಯ್ಯ! ಬರೆದವನು ನಾನಲ್ಲವೇ? ಅಂಥ ಮಹತ್ವದ ವಿಚಾರ ಏನೂ ಅದರಲ್ಲಿಲ್ಲ. ಒಟ್ಟಿನಲ್ಲಿ ನಿಮ್ಮ ಅಭಿಪ್ರಾಯವೇನು?

ಪಟೇಲ್—ಈ ಹೈಕಳ್ನೆಲ್ಲಾ ಏನು ಕೇಳ್ತೀರಾ. ಹೋಗಿ ನೋಡ್ಕೊಂಡು ಬನ್ನಿ. 'ಸೆಟ್ಟಿಯಿಂದ ಪಟ್ನಾಕಂಡೆ' ಅನ್ನೋಂತೆ ಇದರಿಂದಾಲಾದ್ರು ನೀವು ವಿಜಯಪುರ ನ್ನೋಡ್ಕೊಂಡು ಬರಬಯ್ದು.

"ಆಗ್ಲಪ್ಪ. ಮನೇಲೂ ಒಂದುಮಾತು ವಿಚಾರಿಸಿ ಯಾವುದನ್ನೂ ನಿರ್ಧರಿಸಿ ನಿಮಗೆ ಹೇಳುತ್ತೇನೆ. ಹೊರಡೋದಾದರೆ...........ಪಾಠಶಾಲೆ?

"ಏಳೆಂಟು ದಿನ ಏನೂ ಪರವಾಗಿಲ್ಲ ಬಿಡೀ ಅಯ್ಯನೋರೆ. ಹಂಗೆ ಬೇಕಾದ್ರೆ ದೊಡ್ಡತಿಮ್ಮ ನಿಮ್ಮ ಕೈಕೆಳಗೆ ತಯಾರಾದೋನು ಚಿಕ್ಕಹುಡ್ಗಿಗೆ ಈಸು ಹೇಳ್ತಿರುತ್ತಾನೆ",

ರಂಗಯ್ಯನು ಬಾಯಿಹಾಕಿ "ಹೋಗಿ ಅಯ್ಯನೋರೆ. ಹನುಮಣ್ಣ ಇರೋದರೊಳ್ಗೆ ತೀರ್ಮಾನಕ್ಕೆ ಬಂದ್ರೆ ಜವಾಬು ಸಲೀಸಾಗಿ ಬರೀಬಯ್ದು".

ಶಿವರಾಮಯ್ಯನವರು ಕಾಗದದೊಂದಿಗೆ ಮನೆಗೆ ಹೊರಟರು.

× × × × × × × ×

"ಇಲ್ಲಿ ನೋಡು, ಕಾಗದ ಬಂದಿದೆ"

"ಯಾರಿಂದ, ಶಾಮು ಬರೆದಿದ್ದಾನೆಯೇ? ಎಲ್ಲರೂ ಕ್ಷೇಮವಷ್ಟೇ?"

"ನೋಡಿದೆಯಾ, ಹೆಂಗಸರಿಗೆ ಯಾವಾಗಲೂ ತವರು ಮನೆಯಕಡೆ ಗೀಳು. ನನಗೆ ಇನ್ನು ಯಾರೂ ಕಾಗದ ಬರೆಯುವುದೇ ಇಲ್ಲವೇ"?

"ನಿಮ್ಮೂರು ಬಿಟ್ಟು ಬಂದಾಗಿನಿಂದ ಕಾಗದ ಬರುತ್ತಿರುವುದು ಶಾಮುವಿನಿಂದ. ಇನ್ನೇನು ನಿಮ್ಮ ತಮ್ಮ ಬರೆದಿದ್ದಾರೇನು? ಕಾಗದ ನಿಮ್ಮ ಕೈಲಿಟ್ಟುಕೊಂಡು ಕಾಗದ ಯಾರದ್ದು ಎಂದು ಕೇಳಿದರೆ ನಾನೇನು ಹೇಳಲಿ"?

"ತಗೋ. ಓದಿ ನೋಡಿಕೋ".

ಕಾಗದವನ್ನು ಓದುತ್ತ ಓದುತ್ತ ಸೂರ್ಯರಶ್ಮಿಗಳು ಬೀಳುತ್ತಲೇ ವಿಕಸಿಸುವ ಕಮಲದಂತೆ ಲಕ್ಷ್ಮೀದೇವಮ್ಮನವರ ಮುಖ ವಿಕಸಿತವಾಗುತ್ತಾ ಬಂತು. ಓದಿ ಮುಗಿಸಿದವರೇ "ಎಷ್ಟು ಒಳ್ಳೆಯ ಜನಗಳು! ಯಾವಾಗ ಪ್ರಯಾಣ?" ಎಂದರು.

"ಹಾಗಾದರೆ ಹೊರಡು ಅನ್ನುತ್ತೀಯಾ?".

"ಏಕೆ ನಿಮ್ಮ ಅಭಿಪ್ರಾಯವೇನು?".

"ಆಹೊತ್ತು ನಾವು ಮಾಡಿದ ಸ್ವಲ್ಪ ಉಪಕಾರಕ್ಕೆ ಈ ರೀತಿ ಮುಯ್ಯಿ ತೀರಿಸಲು ಹವಣಿಸಿದ್ದಾರೇನೋ ಎಂದು ನನಗೆ ಅನುಮಾನ. ನಮಗಾಗಿ ಅವರೇಕೆ ವೃಥಾ ಹಣವನ್ನು ಖರ್ಚು ಮಾಡಬೇಕು?"

"ನಿಮ್ಮದು ಯಾವಾಗಲೂ ಇಷ್ಟೆ. ಇನ್ನೊಬ್ಬರು ಹೆಚ್ಚು ನಾನು ಕಡಿಮೆ ಎಂದುಕೊಳ್ಳುತ್ತೀರಿ. ಹಾಗಾದರೆ ನಿಮ್ಮ ಪುಸ್ತಕಕ್ಕೆ ಯೋಗ್ಯತೆ ಇಲ್ಲವೇ?"

"ಹಾಗೆ ನಂಬಿಕೆ ಇಲ್ಲದಿದ್ದರೆ ಬರೆಯುತ್ತಿದ್ದೆನೇ? ಆದರೆ ಅದನ್ನು ನಾನೇ ಸ್ವಂತ ಖರ್ಚಿನಿಂದ ಅಚ್ಚು ಹಾಕಿಸಬೇಕೆಂಬುದು ನನ್ನ ಅಭಿಪ್ರಾಯ. ಇತರರು ಯಾಕೆ ಆ ಹೊರೆಯನ್ನು ಹೊರಬೇಕು?.

"ಈಗ ನಮಗಿರುವ ವರಮಾನದಲ್ಲಿ ಹಣ ಕೂಡಿಟ್ಟು ಅಚ್ಚುಹಾಕಿಸಲು ಸಾಧ್ಯವೇ? ಇಲ್ಲಿಗೆ ಬಂದ ಐದು ವರ್ಷಗಳಿಂದ ಎಷ್ಟು ಶೇಖರಿಸಿಟ್ಟಿದ್ದೀರಿ? ನಮ್ಮಿಬ್ಬರ ಹೊಟ್ಟೆ ಬಟ್ಟೆಗೆ ಬೇಕಾದಷ್ಟು ಪಳ್ಳಿಯವರ ದಯದಿಂದ ಸಿಕ್ಕುತ್ತಿದೆ. ಮಕ್ಕಳೇನಾದರೂ ಆಗಿದ್ದರೆ ಆಗ ಗೊತ್ತಾಗುತ್ತಿತ್ತು ನಮ್ಮ ಬಂಡವಾಳ".

"ಅಯ್ಯೋ, ಹುಚ್ಚಿ, ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಯೇ? ಹಾಗೇನಾದರೂ ಮಕ್ಕಳನ್ನು ಕೊಟ್ಟಿದ್ದರೆ ಅವುಗಳ ಬುತ್ತಿಯನ್ನೂ ಜೊತೆಯಲ್ಲೇ ಕೊಡುತ್ತಿದ್ದನು".

"ಅದೇ ರೀತಿ ಈ ನಿಮ್ಮ ಪುಸ್ತಕ ಅಚ್ಚಾಗಲು ಇದು ದೇವರು ತೋರಿಸಿದ ದಾರಿಯೆಂದು ಏಕೆ ನಂಬಬಾರದು. ನನ್ನ ಮಾತನ್ನು ಕೇಳುವುದಾದರೆ ವಿಜಯಪುರಕ್ಕೆ ಹೋಗಿಬರಬೇಕೆಂದೇ ನಾನು ಹೇಳುತ್ತೇನೆ. ಏನೋ ದೇವರು ಕಣ್ಣುಬಿಟ್ಟು ನೋಡಿ ಪುಸ್ತಕ ಅಚ್ಚಾದರೆ ನನಗೂ ನಾಲ್ಕು ಜನರಂತೆ ಉಟ್ಟುಕೊಳ್ಳಲು ಒಂದು ಒಳ್ಳೆಯ ಸೀರೆ ಕೊರಳಿಗೆ ಕರೀಮಣಿಯ ಜೊತೆಗೆ ಏನಾದರೂ ಭಂಗಾರ ಬರಬಹುದು. ಇದರ ಮೇಲೆ ನಿಮ್ಮ ಇಷ್ಟ".

"ನೋಡಿದೆಯಾ ಹೆಂಗಸರ ಬುದ್ಧಿಯನ್ನ. ಯಾವ ಕೆಲಸಕ್ಕೆ ಕೈ ಹಾಕಿದರೂ ದುಡ್ಡು ಬರಬೇಕು ಅದರಿಂದ ಒಡನೆ ಸೀರೆ ತೆಗೆದುಕೊಳ್ಳಬೇಕು. ಅಲ್ಲವೇ ಮುಚ್ಚೀ ಪುಸ್ತಕ ಪ್ರಕಟಿಸಿದರೆ ದುಡ್ಡು ಏನು ಮಳೆ ಸುರಿದಹಾಗೆ ಸುರಿಗು ಬಿಡುತ್ತೆ ಎಂದು ತಿಳಿದಿದ್ದೀಯಾ?"

"ಸರಿ ಬಿಡಿ. ನನಗೇನೋ ಬುದ್ಧಿಯಿಲ್ಲ. ಅದು ಎಂದೋ ಗೊತ್ತಾಗಿದೆ. ಆಗಲಿ ನಿಮ್ಮ ಪುಸ್ತಕ ಅಚ್ಚಾದರೆ ಒಂದೊಂದಕ್ಕೆ ಎಷ್ಟು ಬೆಲೆಯಾಗಬಹುದು?"

"ಸುಮಾರು ಎರಡು ರೂಪಾಯಿ".

"ಎಷ್ಟು ಪ್ರತಿ ಅಚ್ಚುಹಾಕುತ್ತಾರೆ?"

"ಒಂದು ಸಾವಿರ ಅನ್ನು".

"ಹಾಗಾದರೆ ಎರಡು ಸಾವಿರ ರೂಪಾಯಿ ಬಂತಲ್ಲ. ಈ ಲೆಕ್ಕಾನೂ ತಪ್ಪೇ?"

"ಲೆಕ್ಕವೇನೋ ತಪ್ಪಲ್ಲ. ನಮ್ಮ ಭಾವ ಒಂದು ಸಲ ಹೊಲಕ್ಕೆ ಮೆಣಸಿನಗಿಡ ಹಾಕಿಸಿದ್ದ. ಗಿಡದಲ್ಲಿ ಹೂವು ಕಟ್ಟಿತು. ಕಷ್ಟಪಟ್ಟು ಒಂದು ದಿನವೆಲ್ಲಾ ಕೂತುಕೊಂಡು ಒಂದು ಗಿಡದಲ್ಲಿಬಿಟ್ಟಿದ್ದ ಹೂವನ್ನೆಲ್ಲಾ ಎಣಿಸಿದ. ಆಮೇಲೆ ಎಷ್ಟು ಸಾಲು ಗಿಡಗಳು, ಒಂದೊಂದು ಸಾಲಿನಲ್ಲೂ ಎಷ್ಟು ಗಿಡಗಳು, ಒಟ್ಟು ಹೊಲದಲ್ಲಿರುವ ಗಿಡಗಳೆಷ್ಟು, ಬಿಡಬಹುದಾದ

ಕಾಯಿಗಳೆಷ್ಟು, ಒಂದು ಸೇರಿಗೆ ಎಷ್ಟು ಕಾಯಿಗಳು ತೂಗುತ್ತವೆ ಎಂದೆಲ್ಲ ಸರಿಯಾಗಿ ಲೆಕ್ಕಮಾಡಿ ಒಂದು ನೂರು ಮಣ ಕಾಯಿ; ಮಣ ಒಂದಕ್ಕೆ ಹತ್ತು ರೂಪಾಯಿನಂತೆ ಒಂದು ಸಾವಿರ ರೂಪಾಯಿ ಎಂದು ಲೆಕ್ಕಮಾಡಿದ. ಲೆಕ್ಕ ಸರಿಯೋ ಅಲ್ಲವೋ ಹೇಳು? ಹುಚ್ಚೀ, ಹುಚ್ಚೀ, ನಿನ್ನ ಲೆಕ್ಕಾನೂ ಹಾಗೆಯೇ".

"ನಾನು ಹೇಳಲಿಲ್ಲವೆ, ನಾನು ಹೇಳಿದ್ದೆಲ್ಲಾ ನಿಮಗೆ ಸರಿ ಬೀಳುವುದಿಲ್ಲ. ಇಲ್ಲೇನು ಹೂವು ಉದುರಿಹೋಗುತ್ತದೆಯೇ? ಹಣ್ಣುಕಾಯನ್ನು ಕಾಗೆ ತಿನ್ನುತ್ತದೆಯೇ? ಕೊಯ್ಯುವವರು ಕದ್ದುಕೊಂಡು ಹೋಗುತ್ತಾರೆಯೇ? ಇಲ್ಲವೆ ಬೆಲೆ ಇಳಿಯುತ್ತದೆಯೇ? ನೀವೇ ಹೇಳಿ ಜಾಣರು?"

"ಅದರ ಕಷ್ಟ ನಿನಗೇನು ಗೊತ್ತು. ಅಚ್ಚುಹಾಕೋ ಖರ್ಚು; ಕಾಗದದ ಖರ್ಚು; ಅವರಿವರಿಗೆ ಉಚಿತವಾಗಿ ನಮಸ್ಕಾರಪೂರ್ವಕವಾಗಿ ವಿಶ್ವಾಸಪೂರ್ವಕವಾಗಿ ಆಶೀರ್ವಾದಪೂರ್ವಕವಾಗಿ ಮರ್ಯಾದಾಪೂರ್ವಕವಾಗಿ ಒಪ್ಪಿಸುವ ಪ್ರತಿಗಳು; ಮಾರುವ ವ್ಯಾಪಾರಿಗಳಿಗೆ ದಳ್ಳಾಳಿ; ಅಚ್ಚು ಹಾಕಿ ಪ್ರಕಟಿಸಿದವರ ಲಾಭ; ಮಾರದೇ ಉಳಿದ ಪ್ರತಿಗಳ ನಷ್ಟ ಇವೆಲ್ಲಾ ಇರುತ್ತವೆ. ಇಷ್ಟೇ ಅಲ್ಲದೆ ಎಲ್ಲ ಪ್ರತಿಗಳೂ ಒಂದೇಸಲ ಖರ್ಚಾಗಿ ಕೈಗೆ ಒಟ್ಟು ಗಂಟು ಬರುತ್ತದೆಯೇ"?

"ನೀವು ಬಿಡೀಂದ್ರೆ, ಯಾವಾಗಲೂ ಹೀಗೆಯೇ. ಹಾಗಾದರೆ ಪುಸ್ತಕ ಅಚ್ಚುಹಾಕಿಸೋರೆಲ್ಲ ನಷ್ಟಮಾಡಿಕೊಳ್ಳುತ್ತಾರೆಯೇ? ಈ ಸಂಪತ್ತಿಗೆ ಹಗಲೂ ರಾತ್ರೆ ಕಣ್ಣಿಗೆ ಎಣ್ಣೆ ಎರೆದುಕೊಂಡು ಪುಸ್ತಕಗಳನ್ನು ಏಕೆ ಬರೆಯಬೇಕು"?

"ಬರೆಯುವುದೂ ಒಂದು ಹುಚ್ಚು. ಲಕ್ಷ್ಮೀಕಟಾಕ್ಷ ಬೀಳುವುದು ಕೇವಲ ಸ್ವಲ್ಪಮಂದಿಯ ಮೇಲೆ ಮಾತ್ರ. ನಾನಂತೂ ಹಣದ ಆಸೆಯಿಂದ ಬರೆಯಲಿಲ್ಲ".

"ಹಾಗಾದರೆ ಏನು ಉದ್ದೇಶದಿಂದ ಬರೆದಿರಿ"?

"ನೀನು ಹೇಳುತ್ತಿದ್ದೆಯಲ್ಲ ನಮಗೆ ಮಕ್ಕಳಿಲ್ಲ. ನಮ್ಮ ಹೆಸರು ಹೇಳುವವರೇ ಇಲ್ಲದಂತಾಗುತ್ತದೆ ಎಂದು. ಅದಕ್ಕೆ ಕನ್ನಡಭಾಷೆ ಪ್ರಪಂಚ ದಲ್ಲಿರುವವರೆಗೂ ಈ ಪುಸ್ತಕ ನನ್ನ ಹೆಸರು ಹೇಳುತ್ತಿರುತ್ತದೆ. ನಿನಗೆ ಬೇಕಾದದ್ದು ಹಣ, ನನಗೆ ಬೇಕಾಗಿರುವುದು ಬೇರೆ".

"ಹಾಗೇ ಆಗಬೇಕಾದರೂ ಪುಸ್ತಕ ಅಚ್ಚಾಗಬೇಡವೇ? ನಿಮ್ಮ ಅಭಿಲಾಷೆಯಾದರೂ ನೆರವೇರಲಿ. ವಿಜಯಪುರಕ್ಕೆ ಹೋಗಿಬಿಟ್ಟು ಬನ್ನಿ. ಆದರೆ ಮಾತನಾಡುವಾಗ ಏನಾದರೂ ಅಲ್ಪಸ್ವಲ್ಪ ಹಣ ನಮಗೂ ಬರುವ ಹಾಗಿದ್ದರೆ ಅದಕ್ಕೆ ಮಾತ್ರ ಕಲ್ಲು ಹಾಕಿಕೊಳ್ಳಬೇಡಿ".

"ಆಗಲಿ. ಆದರೆ ನಾನು ಹೊರಟರೆ ಅಲ್ಲಿ ಏಳೆಂಟು ದಿನಗಳು ಇರ ಬೇಕಾಗಬಹುದು".

"ಕೆಲಸ ಮುಗಿಯುವ ವರೆಗೂ ಇರಲೇಬೇಕು".

"ನೀನು ಒಬ್ಬಳೇ ಹೇಗೆ ಇಲ್ಲಿ ಇರುತ್ತೀ?"

"ನಿಮ್ಮ ಶಿಷ್ಯರ ಪೈಕಿ ಯಾರಾದರೂ ಇಬ್ಬರು ಚಿಕ್ಕ ಮಕ್ಕಳನ್ನು ರಾತ್ರಿ ಬಂದು ಮಲಗುವಂತೆ ಹೇಳಿದರಾಯಿತು. ಅದು ನಿಮಗೆ ಸರಿ ಎಂದು ತೋರದಿದ್ದರೆ....................".

"ಏಕೆ ಏನೋ ಹೇಳಲು ಹೊರಟವಳು ಸುಮ್ಮನಾದೆಯಲ್ಲಾ ಏನು ಎಂದು ನಾನು ಹೇಳಲೇ?"

"ಹೇಳಿ ನೋಡೋಣ?"

"ಹೇಳಿದರೆ ಏನು ಕೊಡುತ್ತೀಯಾ?"

"ಬಡಪಾಯಿ ನಾನೇನು ಕೊಟ್ಟೇನು? ವಿಜಯಪುರಕ್ಕೆ ಹೋದಾಗ ತಿನ್ನಲು ಮುಸುರೆಯಿಲ್ಲದಂಥ ತಿಂಡಿ ಮಾಡಿಕೊಡುತ್ತೇನೆ".

"ತಿಂಡಿ ಕೊಡುತ್ತೇನೆಂದರೆ ನೀನು ಹೇಳಿದ ಕೆಲಸ ಮಾಡಲು ನಾನೇನು ಮಗುವೇ"?

"ನಾನಿನ್ನೇನು ಕೊಡಲಿ ನನ್ನನ್ನೇ ನನ್ನ ತಂದೆಯವರು ನಿಮಗೆ ಕೊಟ್ಟಿರುವಾಗ ನನ್ನಲ್ಲಿರುವುದೆಲ್ಲವೂ ನಿಮ್ಮದೇ ಆಯಿತು".

"ಬಹಳ ಜಾಣೆಕಣೇ ನೀನು. ನಿನ್ನ ಮನಸ್ಸಿಗೆ ಹೊಳೆದುದೇ ನನ್ನ ಮನಸ್ಸಿಗೂ ಹೊಳಿಯಿತು. ನೀನೂ ನಿನ್ನ ಅಣ್ಣನ ಮನೆಗೆ ಹೋಗಿ ಆರು ವರುಷಗಳಾದುವು. ಅವನು ಎರಡು ಸಲ ಕರೆಯಲು ಬಂದರೂ ನನಗೆ ಊಟಕ್ಕೆ ತೊಂದರೆಯಾಗುವುದೆಂದು ಅವನನ್ನು ಹಾಗೇ ಕಳುಹಿಸಿದ್ದೀಯೆ. ಈಗ ಹೋಗಿ ಎರಡು ದಿವಸ ಏಕೆ ಇದ್ದು ಬರಬಾರದು. ವಿಜಯಪುರಕ್ಕೆ ಹೋಗುವಾಗ ನಿನ್ನನ್ನು ಅಲ್ಲಿ ಬಿಟ್ಟುಹೋಗಿ ಬರುತ್ತಾ ಕರೆದುಕೊಂಡು ಬರುತ್ತೇನೆ".

"ಅದೇನೋ ಅಗಬಹುದು ವಿಜಯಪುರದಲ್ಲಿ ನಿಮ್ಮ ಊಟ ಉಪಚಾರಗಳಿಗೆ ಏನು ಏರ್ಪಾಡು?"

"ಬೇಕಾದಷ್ಟು ಛತ್ರಗಳಿವೆ. ಇಳಿದುಕೊಳ್ಳಲು ಕೊಠಡಿಗಳು ಸಿಕ್ಕುತ್ತವೆ. ಅಡಿಗೆ ಮಾಡಿಕೊಳ್ಳಲು ಪಾತ್ರೆಗಳನ್ನೂ ಅವರೇ ಕೊಡುತ್ತಾರೆ. ಇನ್ನು ತೊಂದರೆ ಏನು?"

"ನಾನೂ ನಿಮ್ಮ ಜೊತೆಯಲ್ಲೇ ಬಂದರೆ ತೊಂದರೆಯೇ ಇರುವುದಿಲ್ಲ ವಲ್ಲ".

"ಈಗ ಬೇಡ ಒಬ್ಬನ ಅಡಿಗೆಗೆ ಅಷ್ಟೇನೂ ಕಷ್ಟವಿಲ್ಲ. ಹೆಂಗಸರನ್ನು ಕರೆದುಕೊಂಡು ಅಪರಿಚಿತ ಸ್ಥಳಕ್ಕೆ ಹೋದರೆ ಹೆಂಗಸರಿಗೂ ಹಿಂಸೆ, ಕರೆದುಕೊಂಡು ಹೋದವರಿಗೂ ಹಿಂಸೆ".

"ನಾನೂ ದೊಡ್ಡ ಊರನ್ನು ನೋಡಿದಂತಾಗುತ್ತಿತ್ತು. ಆದರೆ ನಿಮಗೆ ತೊಂದರೆಯಾಗುವುದಾದರೆ ಬೇಡ. ಯಾವ ದಿನ ಹೊರಡಲು ನಿಶ್ಚಯಿಸಿದ್ದೀರಿ"?

ಶಿವರಾಮಯ್ಯನವರು ಗೋಡೆಗೆ ತಗಲುಹಾಕಿದ್ದ ಪಂಚಾಂಗವನ್ನು ತೆಗೆದುಕೊಂಡು ನೋಡಿ "ನಾಳಿದ್ದು ಗುರುವಾರ ಸಾಯಂಕಾಲ ನಾಲ್ಕು

ಗಂಟೆಗೆ ಹೊರಡಲು ಪ್ರಶಸ್ತವಾಗಿದೆ. ಎಲ್ಲವನ್ನೂ ಸಿದ್ಧಮಾಡಿಕೋ" ಎಂದು ಹೇಳಿ ಗ್ರಾಮಸ್ಥರಿಗೆ ತಮ್ಮ ನಿರ್ಣಯವನ್ನು ತಿಳಿಸಲು ಹೊರಟರು.

೫

ಗುರುವಾರ ಮಧ್ಯಾಹ್ನ ಹಳ್ಳಿಯಲ್ಲೆಲ್ಲಾ ಸಡಗರ. ರಾಮೇಗೌಡನ ಹೊಸ ಕಮಾನಿನಗಾಡಿಗೆ ನಂಜಪ್ಪನ ದೊಡ್ಡ ಎತ್ತುಗಳನ್ನು ಕಟ್ಟಿ ಒಳಗೆಲ್ಲಾ ಹುಲ್ಲು ಹಾಸಿ ಸಿದ್ಧಮಾಡಿ ಅಯ್ಯನವರ ಮನೆಯ ಮುಂದೆ ನಿಲ್ಲಿಸಿದ್ದಿತು. ಲಕ್ಷ್ಮೀದೇವಮ್ಮನವರು ಮನೆಯ ಪದಾರ್ಥಗಳನ್ನೆಲ್ಲಾ ಸರಿಮಾಡಿಟ್ಟು ಶಿವರಾಮಯ್ಯನವರಿಗೆ ಬೇಕಾಗಬಹುದಾದ ಅಡಿಗೆಯ ಸಾಮಾನುಗಳು, ತಮ್ಮ ಮಾತಿನ ಪ್ರಕಾರ ಮಾಡಿ ಕೊಡಬೇಕಾಗಿದ್ದ ಮುಸುರೆ ಇಲ್ಲದ ತಿಂಡಿ ಸಿದ್ಧಮಾಡಿಟ್ಟರು. ಪಟೇಲರು, ಗಂಗಯ್ಯ, ರಂಗಪ್ಪ ಮೊದಲಾಗಿ ಎಲ್ಲರೂ ಜಗುಲಿಯ ಮೇಲೆ ಸೇರಿದ್ದರು. ಪತಿ ಪತ್ನಿಯರು ಸಾಮಾನು ಸಮೇತ ಗಾಡಿಯಲ್ಲಿ ಬಂದು ಕುಳಿತರು. ಮಕ್ಕಳ ಗುಂಪು ಗಾಡಿಯಸುತ್ತ ನಿಂತಿದ್ದಿತು. ಶಿವರಾಮಯ್ಯನವರು ಎಲ್ಲರಿಗೂ ಮನೆಗಳಿಗೆ ಹೊರಡಬಹುದೆಂದು ಅನುಮತಿ ಕೊಟ್ಟರು. ಗಾಡಿ ಹೊರಡುತ್ತಲೇ ಎಲ್ಲರೂ ಗಾಡಿಯ ಹಿಂದೆ ಹೊರಟರು. ಒಬ್ಬೊಬ್ಬರೂ ಒಂದೊಂದು ಹಿತೋಪದೇಶಮಾಡುವವರೇ. ಷರತ್ತುಗಳನ್ನು ಒಪ್ಪಿಕೊಳ್ಳುವುದಕ್ಕೆ ಮುಂಚೆ ಲಾಯರ ಕೇಳಿ ರುಜು ಹಾಕಬೇಕೆಂದೂ, ಪುಸ್ತಕವನ್ನು ಅಲ್ಲಿ ಬಿಟ್ಟುಬರದೆ ಹಿಂದಕ್ಕೆ ತರಬೇಕೆಂದೂ, ಸಾಧ್ಯವಾದಷ್ಟು ಹೆಚ್ಚು ಲಾಭ ಬರುವ ಹಾಗೆ ಚೌಕಾಶೀ ಮಾಡಬೇಕೆಂದೂ, ಎಲ್ಲಾ ವಿಚಾರಗಳಿಗೂ ಕಾಗದ ಬರೆಯ ಬೇಕೆಂದೂ ಒಟ್ಟೊಟ್ಟಾಗಿ ಹೇಳಲು ತೊಡಗಿದರು. ಎಲ್ಲರಿಗೂ "ಹಾಗೇ ಆಗಲಿ, ನೀವು ಹೇಳಿದ್ದನ್ನು ಜ್ಞಾಪಕದಲ್ಲಿಟ್ಟುಕೊಂಡಿರುತ್ತೇನೆ" ಎಂದು ಹೇಳುತ್ತಾ, ಗಾಡಿ ಹೊಡೆಯುತ್ತಿದ್ದ ತಿಮ್ಮನಿಗೆ ಸಂಜ್ಞೆ ಮಾಡಲು ಎತ್ತುಗಳು ಚುರುಕಾಗಿ ನಡೆಯಲಾರಂಭಿಸಿದವು. ಗಾಡಿಗೂ ಗ್ರಾಮಸ್ಥರಿಗೂ ಅಂತರ ಹೆಚ್ಚಾದರೂ "ಹೋಗಿ ಬರುತ್ತೀರಾ ಸ್ವಾಮಿ, ಹೋಗಿ ಬರುತ್ತೀರಾ ಅವ್ವಾ" ಎಂಬ ಶಬ್ದ ಕೇಳಿಬರುತ್ತಲೇ ಇತ್ತು.

ಶಿವರಾಮಯ್ಯನವರು ಪತ್ನಿಯ ಕಡೆ ತಿರುಗಿ "ನೋಡಿದೆಯಾ ಎಷ್ಟು ಒಳ್ಳೆಯ ಜನ. ಸ್ವಂತ ಅಣ್ಣತಮ್ಮಂದಿರೂ ಇಷ್ಟು ವಿಶ್ವಾಸ ತೋರಿಸರು" ಎಂದು ಮಾತಿಗೆ ಪ್ರಾರಂಭಿಸಿದರು.

"ಎಷ್ಟು ದೊಡ್ಡಸ್ತಿಕೆಯವರು ನೋಡಿ. ಅವರು ಹೇಳುವ ಪ್ರತಿಯೊಂದು ಮಾತನ್ನೂ ನೀವು ಜ್ಞಾಪಕದಲ್ಲಿಟ್ಟುಕೊಂಡು ನಡೆದರೆ ಒಳ್ಳೆಯದಲ್ಲವೇ"?

"ಎಲ್ಲವನ್ನೂ ಹೇಗೆ ನಡೆಸುವುದಕ್ಕಾಗುತ್ತದೆ? ಆ ಸಮಯದಲ್ಲಿ ದೇವರು ಹೇಗೆ ದಾರಿತೋರಿಸುತ್ತಾನೋ ನೋಡೋಣ. ಇಷ್ಟಕ್ಕೂ ಮುಖ್ಯವಾಗಿ ನನ್ನ ಪುಸ್ತಕ ವಿದ್ವಾಂಸರ ಮೆಚ್ಚುಗೆ ಪಡೆಯಬೇಕಲ್ಲ. ಅಲ್ಲವೇ ತಿಮ್ಮಯ್ಯ ನೀನು ಹೇಳು"?

"ಅಲ್ಲಾ ಸೋಮಿ, ನಿಮಗಿಂತ ಸಂದಾಗಿ ಪುಸ್ತಕ ಬರೆಯೋರೂ ಇವ್ರಾ! ನಾಬೇರೇ ಕಂಡಿಲ್ಲ".

"ಇನ್ನೆಲ್ಲಾ ಏಳೆಂಟು ದಿನಗಳಲ್ಲಿ ನಿಮ್ಮ ಅಯ್ಯನೋರ ಬಂಡವಾಳ ತಿಳಿಯುತ್ತದೆ ತಿಮ್ಮಯ್ಯ. 'ಹಾಳೂರಿಗೆ ಉಳಿದವನೇ ಗೌಡ' ಎಂಬಂತೆ ಸೋಮಪುರದಲ್ಲಿ ನಾನು ದೊಡ್ಡ ವಿದ್ಯಾವಂತ. ವಿಜಯಪುರದಲ್ಲಿ ನನ್ನನ್ನು ಮೀರಿಸುವವರು ಎಷ್ಟು ಜನವೋ. ಚನ್ನೋಹಳ್ಳಿಗೆ ಇನ್ನೂ ಎಷ್ಟು ದೂರ? ಅಲ್ಲಿಗೆ ಹೋಗಲು ಎಷ್ಟು ಹೊತ್ತಾಗಬಹುದು"?

"ಅದು ಸುಮಾರಿಗೆ ಹನ್ನೆಳ್ಡು ಮೈಲಿ ಆಗಬಹುದು. ಈಗಾಗಲೇ ಸಂಜೆ ಆಗ್ತಾ ಬಂತು. ಹೊತ್ತು ಮುಳುಕಿದ ಒಂದೆರಡು ಗಂಟೆ ಮೇಲೆ ಹೋಗಬಯ್ದು".

"ಕತ್ತಲೆಯಾಗುತ್ತದಲ್ಲ. ನಮ್ಮದೊಂದೇ ಗಾಡಿಯಾಗುತ್ತದಲ್ಲ"?

"ದಾರಿ ನಂಗೆ ಚೆನ್ನಾಗಿ ಗೊತ್ತು. ಲಾಂದರ ಗಾಡೀಗೆ ಕಟ್ಟಿಕೊಂಡು ಬಂದಿವ್ನಿ. ಕತ್ತಿಸಿದರಾಯ್ತು. ಜೊತೆಗೆ ಇವತ್ತು ಬೊಮ್ಮನಹಳ್ಳಿ ಸಂತೆ.

ಬೊಮ್ಮನಹಳ್ಳಿಗೂ ಚನ್ನೋಹಳ್ಳಿಯಿಂದ ಗಾಡೀ ಜನ ಬಂದಿರುತ್ತಾರೆ. ಜೊತೆಗಾಡೀನು ಸಿಕ್ಕಬಹುದು".

"ಹಾಗಿದ್ರೆ ಏನು ತಿಮ್ಮಯ್ಯ. ಕಳ್ಳಕಾಕರು ಬಂದು ನಮ್ಮ ಹತ್ತಿರ ಏನು ತಗೋ ಬೇಕು"?

ಲಕ್ಷ್ಮೀದೇವಮ್ಮನವರು ನಗುತ್ತಾ "ಏಕೆ ಹಾಗೆ ಹೇಳ್ತೀರಿ. ನಿಮ್ಮ ಪುಸ್ತಕ"?

"ಅದನ್ನು ತೆಗೆದುಕೊಂಡು ಅವರೇನು ಮಾಡಾರು"?

"ಅವರಲ್ಲೂ ಯಾರಾದರೂ ಓದುಬರಹ ಬಲ್ಲವರು ಇದ್ದರೆ ಅದರ ಉಪಯೋಗ ಮಾಡಿಕೊಂಡೇ ಮಾಡಿಕೊಳ್ಳುತ್ತಾರೆ. ಬೇರೆ ಊರಿಗೆ ಹೋಗಿ ಅಚ್ಚು ಹಾಕಿಸುತ್ತಾರೆ; ಮಾರುತ್ತಾರೆ".

"ಅದೇನು ಚಿನ್ನ ಬೆಳ್ಳಿ ಪದಾರ್ಥಗಳನ್ನು ಕದ್ದು ಮಾರುವಷ್ಟು ಸುಲಭ ಎಂದು ತಿಳಿದೆಯೋ? ಒಬ್ಬರ ವಿದ್ಯೆ ಇನ್ನೊಬ್ಬರು ಕದಿಯೋದಕ್ಕೆ ಸಾಧ್ಯವೆ"?

"ಅದೇನೋ ನಿಮ್ಮ ಧೈರ್ಯ. ನನಗೆ ಗೊತ್ತಾಗುವುದಿಲ್ಲ. ಯಾರು ಬೇಕಾದರೂ ನಿಮ್ಮ ಪುಸ್ತಕ ಅಪಹರಿಸಿ ಅದನ್ನು ಅಚ್ಚುಹಾಕಿಸಿ ಬರುವ ದುಡ್ಡು ತೆಗೆದುಕೊಳ್ಳಬಹುದೆಂದು ನನ್ನ ಅಭಿಪ್ರಾಯ. ಬರೆದವರು ಯಾರು ಎಂದು ಕೇಳಿದರೆ ನಾನು ಎಂದು ಏಕೆ ಹೇಳಿಕೊಳ್ಳಬಾರದು. ಅವನು ಅಲ್ಲ ಎಂದು ಹೇಳುವವನು ಯಾರು"?

"ಕೇಳಿದೆಯಾ ತಿಮ್ಮಯ್ಯ ಇವರು ಹೇಳುವುದನ್ನ. ಕಳ್ಳರು ಪುಸ್ತಕ ಕದ್ದದನ್ನು ನೀನೆಲ್ಲಾದರೂ ನೋಡಿದೀಯೇನಯ್ಯ"?

"ಇಲ್ಲ ಬುದ್ಧೀ. ಕೈಗೆ ಸಿಕ್ಕಿದರೂ ಬಿಟ್ಟು ಹೋಗೋದ್ನ ನೋಡಿ ದೀನಿ. ಒಂದು ಸರ್ತಿ ಗಾಡಿಕಟ್ಟಿಕೊಂಡು ಊರಿಂದ ವಿಜಯಪುರಕ್ಕೆ ಹೋಗಿದ್ದೆ. ಪುರ ಸೇರುವ ಹೊತ್ತಿಗೆ ಇನ್ನೂ ಸ್ವಾಮಿ ಮೂಡಿರಲಿಲ್ಲ. ಮುಸಕು ಮುಸಕು ಬೆಳಕಾಗಿತ್ತು. ಆಗ ಊರ ಹತ್ತಿರ ಕೆರೆ ಅಂಗಳದೊಳಗೆ

ಪೋಲೀಸೋರೂ ಅವರೂ ಇವರೂ ಒಂದು ಗುಂಪು ಸೇರಿತ್ತು. ನಾನೂ ಗಾಡಿ ಬಿಟ್ಟು ಅಲ್ಲಿಗೆ ನೋಡೋಣಾಂತ್ಹೋದೆ. ರಾತ್ರಿ ಯಾರ ಮನೆಗೋ ಕಳ್ಳರು ಬಿದ್ದು ಪೆಟ್ಟಿಗೆ ಎತ್ತಿಕೊಂಡು ಬಂದು ಅಲ್ಲಿ ಒಡೆದುಹಾಕಿ ಪುಸ್ತಕ ಬಿಟ್ಟು ಬಾಕೀದೆಲ್ಲಾ ಹೊತ್ತುಕೊಂಡು ಹೋಗಿದ್ರು. ಪುಸ್ತಕಗಳು ಅಲ್ಲೆಲ್ಲಾ ಚೆಲ್ಲಾಡಿ ಬಿಟ್ಟಿದ್ದವು ನನ್ನೊಡೆಯಾ".

ಶಿವರಾಮಯ್ಯನವರು ಮುಗುಳ್ನಗೆ ನಗುತ್ತಾ ದಂಪತಿಯ ಕಡೆ ನೋಡಿ "ನೋಡಿದ್ಯೋ, ಪುಸ್ತಕ ಸಿಕ್ಕಿದರೂ ಅವರಿಗೆ ಬೇಡ".

"ಹೋಗಲಿ ಬಿಡಿ. ಈ ಹೊತ್ತಿನಲ್ಲಿ ಕಳ್ಳರ ಮಾತೇಕೆ. ಹನ್ಯೋ ಹಳ್ಳಿಯಿಂದ ವಿಜಯಪುರಕ್ಕೆ ಎಂದು ಹೊರಡಬೇಕೆಂದಿರಿ".

"ನಾಳೆ ಸಾಯಂಕಾಲ ನಿಮ್ಮೂರಿಂದ ಹೊರಟರೆ ರಾತ್ರಿ ಚಂದ್ರಗಿರಿಗೆ ಹೋಗಬಹುದು. ಅಲ್ಲಿ ಸುಮಾರು ಹನ್ನೊಂದು ಗಂಟೆಗೆ ರೈಲು ಬರುತ್ತೆಂದು ಕಾಣುತ್ತದೆ. ಅಲ್ಲವೇ ತಿಮ್ಮಯ್ಯಾ?"

"ಹೌದು ಸಾಮಿ, ಮಧ್ಯ ರಾತ್ರಿಹೊತ್ತಿಗೆ ಬತ್ತದೆ".

"ಅಣ್ಣನ ಮನೆಗೆ ನಾವು ಹೋಗಿ ಏಳೆಂಟು ವರ್ಷಗಳಾದುವು. ಒಂದೆರಡು ದಿನಗಳು ಇದ್ದು ಭಾನುವಾರ, ಸೋಮವಾರದ ಹಾಗೆ ಹೋದರೆ ಆಗುವುದಿಲ್ಲವೇ?"

'ಅಲ್ಲಿಂದ ಹಿಂತಿರುಗಿ ಬಂದಮೇಲೆ ಬೇಕಾದರೆ ಎರಡು ದಿನವಿರೋಣ. ಹೊರಟ ಕೆಲಸ—ಕಾಯೋ ಹಣ್ಣೋ—ನೋಡಿಕೊಂಡರೆ ಮನಸ್ಸು ಸ್ತಿಮಿತದಲ್ಲಿರುವುದು".

"ಹೋಗುವವರೆಗೂ ನಮ್ಮಿಬ್ಬರ ಮಾತು. ಅಲ್ಲಿ ಶಾಮು ಏನು ಹೇಳುತ್ತಾನೋ?"

"ನಾನು ಹೇಳುತ್ತಿರುವುದನ್ನೇ ಶಾಮುವೂ ಹೇಳುತ್ತಾನೆ. ಈಗ ನಿನಗೆ ಹೇಳುತ್ತಿರುವ ಜವಾಬನ್ನೇ ಅವನಿಗೂ ಹೇಳಬೇಕಾಗುತ್ತದೆ. ಆದರೆ

ನೋಡು ನೀನು ಮಾತ್ರ ಶಾನುಭೋಗರ ಹಿಡಿದು ಮಾತನಾಡಿಕೊಂಡು ಬರಕೂಡದು".

ಅಷ್ಟು ಹೊತ್ತಿಗೆ ಬೊಮ್ಮನಹಳ್ಳಿ ಸಮೀಪಿಸಿತು. ಕತ್ತಲೆಯೂ ಆಗುತ್ತ ಬಂತು. ಸಂತೆಯ ಗಾಡಿಗಳು ಜೊತೆಗೆ ಸೇರಲಾರಂಭಿಸಿದವು. ಗಾಡಿಗಳ ಗಡಗಡ ಶಬ್ದಗಳಲ್ಲಿ ಆಡಿದ ಮಾತು ಕೇಳಿಸುವುದು ಕಷ್ಟವಾಯಿತು. ಗಾಡಿ ಹೊಡೆಯುವವರಲ್ಲಿ ಕೆಲವರು ಆನಂದದಿಂದ ಹಾಡಲಾರಂಭಿಸಿದರು. ಈ ಸಂಗೀತಕ್ಕೆ ಚಕ್ರದ ಕಬ್ಬಿಣದ ಪಟ್ಟಿಗಳು ಕಲ್ಲುಗಳ ಮೇಲೆ ಹತ್ತಿ ಇಳಿಯುವಾಗ ಮಾಡುತ್ತಿದ್ದ ಶಬ್ದವೇ ತಬಲ. ಎತ್ತುಗಳ ಕೊರಳಲ್ಲಿ ತೂಗಾಡುತ್ತಿದ್ದ ಕಿರುಗಂಟೆಗಳ ಶಬ್ದವೇ ತಾಳ. ಹಾಡಿಕೆಯಲ್ಲಿ ರಾಗ ತಾಳಗಳು ಇಲ್ಲದಿರಬಹುದು ಆದರೂ ಹಾಡುವವನ ಮನಸ್ಸನ್ನು ಸಂಪೂರ್ಣವಾಗಿ ಆವರಿಸಿ ಉಕ್ಕಿ ಹರಿದ ಆನಂದವು ಹಾಡಿನ ರೂಪದಲ್ಲಿ ಹೊರಹೊರಡುತ್ತಿದ್ದುದರಿಂದ ಕೇಳುವವರಿಗೂ ಆನಂದಾನುಭವವನ್ನುಂಟು ಮಾಡುತ್ತಿದ್ದುವು.

ದಟ್ಟವಾಗಿ ಹುಲ್ಲುಹಾಸಿ ಮೇಲೆ ಜಮಖಾನ ಹಾಕಿದ್ದ ಗಾಡಿಯಲ್ಲಿ ಮಾತಾಡುವ ಅವಕಾಶ ತಪ್ಪುತ್ತಲೇ ಲಕ್ಷ್ಮೀದೇವಮ್ಮನವರಿಗೆ ನಿದ್ರೆ ಹತ್ತಿತು. ಶಿವರಾಮಯ್ಯನವರು ಗ್ರಂಥದ ವಿಚಾರ ಆಲೋಚಿಸಲಾರಂಭಿಸಿದರು. ಹೊತ್ತು ಹೋದದ್ದೇ ತಿಳಿಯಲಿಲ್ಲ. ಚನ್ನೋಹಳ್ಳಿಗೆ ತಲುಪಿ ತಿಮ್ಮಯ್ಯನು ಗಾಡಿ ಯಾವಕಡೆ ಹೊಡೆಯಬೇಕೆಂದು ಕೇಳಿದಾಗ ಬೆಚ್ಚಿ ಬಿದ್ದವರಂತೆ ಎಚ್ಚರಗೊಂಡು ಶಾಮಣ್ಣನವರ ಮನೆಯ ದಾರಿಯನ್ನು ಹೇಳಿದರು. ಗಾಡಿ ಮನೆಯ ಹತ್ತಿರ ನಿಂತಾಗ ರಾತ್ರಿ ಹತ್ತು ಗಂಟೆಯಾಗಿದ್ದಿತು. ಕಾಗದ ಬರೆದು ಬರುತ್ತಾರೆಂದು ನಿರೀಕ್ಷಿಸುತ್ತಿದ್ದ ಬಂಧುಗಳು ಬಂದಾಗಲೇ ಬಹಳ ಸಂತೋಷ; ಬರಬೇಕೆಂದು ಆಹ್ವಾನಿಸಿದರೂ ಬಾರದೇ ಇದ್ದವರು—ಪ್ರೀತಿಯ ಸಮೀಪದ ನೆಂಟರು—ಅನಿರೀಕ್ಷಿತವಾಗಿ ಬಂದರೆ? ಶಾಮಣ್ಣನವರ ಮನೆಯಲ್ಲಿಯ ಆನಂದ ಹೇಳ ತೀರದು. ನಿದ್ರೆಮಾಡುತ್ತಿದ್ದ ಮಕ್ಕಳ ಕಿವಿಯಲ್ಲೆಲ್ಲಾ ಅತ್ತೆಮಾವ ಬಂದ ಸುದ್ದಿ ಓಡಾಡಿ ಎಲ್ಲರನ್ನೂ ಎಬ್ಬಿಸಿತು. ಗಾಡಿಯಲ್ಲಿದ್ದ ಸಾಮಾನುಗಳನ್ನು ಒಳಕ್ಕೆ ಸಾಗಿಸಲು ಮಕ್ಕಳ

ಪಡಗರವೇ ಸಡಗರ. ನಾದಿನಿಯ ಯೋಗಕ್ಷೇಮವನ್ನು ಮಕ್ಕಳಿಗೆ ಬಿಟ್ಟು ವೆಂಕಮ್ಮನವರು ಅಡಿಗೆಯ ಮನೆಯನ್ನು ಹೊಕ್ಕರು. ಲಕ್ಷ್ಮೀದೇವಮ್ಮನವರು ಬಿಚ್ಚಿಗ ತಿಂಡಿಯ ಬುಟ್ಟಿ ಸುತ್ತ ಕುಳಿತು ಯಥಾಶಕ್ತಿ ಕಾಣಿಕೆ ಸ್ವೀಕರಿಸುವ ಮಕ್ಕಳು ಮಾವನ ಯೋಗಕ್ಷೇಮವನ್ನು ವಿಚಾರಿಸುವುದನ್ನೇ ಮರೆತರು. ಒಳಗಿನಿಂದ ಕರೆ ಬರುವವರೆಗೂ ಭಾವನನ್ನು ಮೈದುನನೇ ವಿಚಾರಿಸುತ್ತಿರ ಬೇಕಾಯಿತು.

೬

ಶನಿವಾರ ಬೆಳಿಗ್ಗೆ ರೈಲು ಇಳಿದವರೇ ಟಾನಸ್ಲೀಯವರು ತಮ್ಮ ಕಾಗದದಲ್ಲಿ ಸೂಚಿಸಿದ ದಾರಿಯನ್ನು ಹಿಡಿದು ಶಿವರಾಮಯ್ಯನವರು ಹೊರಟರು. ಇನ್ನೂ ಚನ್ನಾಗಿ ಬೆಳಗಾಗಿರಲಿಲ್ಲ. ಸುಮಾರು ಹದಿನೈದು ನಿಮಿಷಗಳು ನಡೆದು ವಿವರಣೆಯ ಪ್ರಕಾರ ಪಾದ್ರಿಗಳ ಬಂಗಲೆಯ ಹತ್ತಿರಕ್ಕೆ ಬಂದಿರಬೇಕೆಂದು ಅನುಮಾನಿಸುತ್ತಾ ಯಾರನ್ನಾದರೂ ಕಂಡರೆ ವಿಚಾರಿಸ ಬೇಕೆಂದು ಸುತ್ತಲೂ ನೋಡಿದರು. ಆವರಣದ ಗೋಡೆಯಿಂದ ಹೊರಕ್ಕೆ ಬಾಗಿದ್ದ ಕಣಗಲು ಹೂವಿನ ಗಿಡವನ್ನು ತಮ್ಮ ಕೈ ಕೋಲಿನ ಕೊಕ್ಕೆಯಿಂದ ಇನ್ನೂ ಬಗ್ಗಿಸಿಕೊಂಡು ಹೂಗಳನ್ನು ಬಿಡಿಸಿಕೊಳ್ಳುತ್ತಿದ್ದ ಒಬ್ಬರು ಕಂಡು ಬಂದರು. ಅವರ ಸಮೀಪಕ್ಕೆ ಹೋಗಿ, "ಸ್ವಾಮಿ ಟಾನಸ್ಲೀ ಎಂಬ ಪಾದ್ರಿಗಳ ಬಂಗಲೆ ಇದೇಯೋ"? ಎಂದರು.

ತಮ್ಮ ಕೆಲಸದಲ್ಲಿ ಮಗ್ನರಾಗಿದ್ದ ವ್ಯಕ್ತಿ ಸ್ವಲ್ಪ ಚಕಿತರಾಗಿ ಬಗ್ಗಿಸಿ ಕೊಂಡಿದ್ದ ಗಿಡವನ್ನು ಕೈ ಬಿಟ್ಟು, "ಹೌದು, ನೀವು ಯಾರು"? ಎಂದು ಮರುಪ್ರಶ್ನೆ ಹಾಕಿದರು.

"ನನ್ನದು ಪರಸ್ಥಳ. ಪಾದ್ರಿಗಳಲ್ಲಿ ಸ್ವಲ್ಪ ಕೆಲಸವಿತ್ತು. ತಮಗೆ ತೊಂದರೆ ಕೊಟ್ಟೆ ಕ್ಷಮಿಸಬೇಕು. ಹೂವಿನ ಗಿಡವನ್ನು ಪುನಃ ಬಗ್ಗಿಸಿ ಕೊಡಲೇ".

ತಾವು ನಿಂತಿದ್ದ ನೆರಳಿನಿಂದ ಇನ್ನೂ ಕತ್ತಲೆಯಾಗಿದ್ದ ಸ್ಥಳದಿಂದಲೇ

ಶಿವರಾಮಯ್ಯನವರನ್ನು ದೃಷ್ಟಿಸಿ ನೋಡುತ್ತಿದ್ದ ಹೂವುಮಯ್ಯುತ್ತಿದ್ದವರು "ಏನೂ ಬೇಡ, ಬೇಕಾದರೆ ನನ್ನ ಕೈ ಕೋಲಿನಿಂದ ಬಗ್ಗಿಸಿಕೊಳ್ಳುತ್ತೇನೆ. ನಿಮ್ಮ ನಾಮಧೇಯವೇನೆಂದು ಕೇಳಬಹುದೇ"?

"ನನ್ನದು ಪರಸ್ಥಳ. ಮೇಲಾಗಿ ಹಳ್ಳಿ. ತಮ್ಮ ಪರಿಚಯ ನನಗೆ ಇಲ್ಲ. ತಮಗೆ ಟಾನಸ್ಲೇಯವರ ಪರಿಚಯ ಉಂಟೆಂದು ಕಾಣುತ್ತದೆ".

"ಇಲ್ಲದಿದ್ದರೆ ಪ್ರತಿದಿನವೂ ಹೂವು ಬಿಡಿಸಿಕೊಳ್ಳಲು ಅವರು ಅನುಮತಿ ಕೊಡುತ್ತಿದ್ದರೇ. ಹೆಸರು ಹೇಳಲು ಏಕೆ ಹಿಂದೆಗೆಯುತ್ತೀರಿ" ಎಂದು ಕೇಳಿ ಸ್ವಲ್ಪ ಹಾಸ್ಯದ ಧ್ವನಿಯಲ್ಲಿ "ನಾನು ಜನಗಳ ಹೆಸರನ್ನು ಅವರ ಮುಖ, ಧ್ವನಿ ಇವುಗಳ ಸಹಾಯದಿಂದ ಹೇಳಬಲ್ಲೆ. ನಿಮ್ಮ ಹೆಸರು ಹೇಳಲೇ?"

"ಆಗಲಿ. ಅಪ್ಪಣೆ ಕೊಡಿಸೋಣವಾಗಲಿ ನೋಡೋಣ".

"ಲೋಕವ್ಯವಹಾರದಲ್ಲಿ ತಮ್ಮ ಹೆಸರು ಶಿವರಾಮಯ್ಯ. ಆಪ್ತೇಷ್ಟರಿಗೆ ಶಿವೂ".

ಶಿವರಾಮಯ್ಯನವರಿಗೆ ಆಶ್ಚರ್ಯವಾಯಿತು. ವ್ಯಕ್ತಿಯು ಪರಿಚಯಸ್ಥರಿರಬೇಕು. ಹಾಕಿದ್ದ ಉದ್ದವಾದ ಅಂಗಿ, ತಲೆ ಕಿವಿಗಳನ್ನು ಮುಚ್ಚಿದ್ದ ಕಂಬಳಿ ಟೋಪಿ, ಹೊದೆದಿದ್ದ ಶಾಲು ವ್ಯಕ್ತಿಯ ಗುರುತು ಹಿಡಿಯುವುದನ್ನು ಶ್ರಮಸಾಧ್ಯವಾಗಿ ಮಾಡಿದ್ದುವು. ಧ್ವನಿಯೂ ಸ್ಫುಟವಾಗಿ ಕೇಳುತ್ತಿರಲಿಲ್ಲ. ಹೆಸರನ್ನು ಸರಿಯಾಗಿ ಹೇಳುವುದಲ್ಲದೆ ನಂಟರಿಷ್ಟರು ಕೂಗುವ ಹೆಸರನ್ನು ಹೇಳುವುದು ನೋಡಿದರೆ ತಮ್ಮ ಬಂಧುವರ್ಗದಲ್ಲಿ ಒಬ್ಬರಾಗಿರಬೇಕು. ಬಂಧುಗಳು ಯಾರೂ ವಿಜಯಪುರದಲ್ಲಿದ್ದ ಜ್ಞಾಪಕವಿಲ್ಲ. ಯಾರಿರಬಹುದು ಎಂದು ಯೋಚಿಸುತ್ತಿರುವಾಗ ವ್ಯಕ್ತಿಯೇ ರಸ್ತೆಗೆ ಬಂದು ಹೊದೆದಿದ್ದ ಶಾಲನ್ನು ಹಿಂದಕ್ಕೆ ಸರಿಸಿ "ಏಕೆ ಶಿವೂ, ಇನ್ನೂ ಗುರುತು ಹತ್ತಲಿಲ್ಲವೇ"? ಎಂದರು.

"ಇದೇನು ಚಿಕ್ಕಪ್ಪ! ವಿಜಯಪುರಕ್ಕೆ ಬಂದುದು ಯಾವಾಗ? ನನಗೆ ತಿಳಿದೇ ಇರಲಿಲ್ಲ. ನಿಮ್ಮ ಧ್ವನಿಯೂ ಸ್ವಲ್ಪ ಬದಲಾಯಿಸಿದ ಹಾಗಿದೆ.

ನೀವು ಶಾಲಿನ ಮುಸುಕನ್ನು ತೆಗೆಯದಿದ್ದರೆ ನಿಮ್ಮ ಗುರುತು ನಾನು ಹಿಡಿಯುತ್ತಲೇ ಇರಲಿಲ್ಲ".

"ಹೇಗಪ್ಪಾ ಹಿಡಿದೀಯೆ. ನೀನಾಗಲೇ ಮುದುಕನಾಗಿ ಬಿಟ್ಟೆ. ಕಣ್ಣು ಮಂಜು, ಕಿವಿ ದೂರ. ನಾನು ಹುಡುಗ. ಎರಡೂ ಚುರುಕಾಗಿವೆ. ಇಲ್ಲವಪ್ಪ ಬಾಯಿಯಲ್ಲಿದ್ದ ನಾಲ್ಕು ಕೆಟ್ಟ ಹಲ್ಲುಗಳು ಬಿದ್ದುಹೋದರೆ ನನ್ನ ಧ್ವನಿ ಅಷ್ಟು ಬದಲಾಯಿಸಿದೆಯೇ? ಹೋಗಲಿ ಬಿಡು. ನಿನ್ನ ತಮ್ಮನಿಗೆ ಈಗ ತಹಸೀಲಿಯ ಕಛೇರಿಯಲ್ಲಿ ಎಂಭತ್ತು ರೂಪಾಯಿನ ನೌಕರಿ ಇದೆ. ಯಾಕೆ ಊರಲ್ಲಿ ನಿನಗೆ ಗೊತ್ತಾಗಲಿಲ್ಲವೇ?"

"ರಾಮು ಇನ್ನೂ ಓದುತ್ತಿದ್ದಾಗ ನಾನು ಊರು ಬಿಟ್ಟೆ. ಪುನಃ ಹೋಗಿಲ್ಲ".

"ಹಾಗಾದರೆ ಈಗ ಎಲ್ಲಿದ್ದೀಯೆ? ಊರನ್ನು ಏಕೆ ಬಿಟ್ಟೆ? ಏನು ಮಾಡಿಕೊಂಡಿದ್ದೀಯೆ"?

"ಸೋಮಪುರ ಎಂಬ ಹಳ್ಳಿಯಲ್ಲಿ ಒಂದು ಕೂಲಿಮಠ ಇಟ್ಟು ಕೊಂಡಿದ್ದೇನೆ. ನಾವಿರುವರಿಬ್ಬರಿಗೆ ಜೀವನಕ್ಕೆ ಸಾಕು. ಶೀನನಿಗೆ ಮಕ್ಕಳು ಜಾಸ್ತಿ. ಊರಿನ ಆಸ್ತಿ ಎಲ್ಲಾ ಅವನೇ ನೋಡಿಕೊಳ್ಳುವಂತೆ ಹೇಳಿಬಿಟ್ಟು ಬಂದಿದ್ದೇನೆ".

"ಇದ್ದರೆ ನಿನ್ನಂತಹ ಅಣ್ಣ ಇರಬೇಕು. ನೀನು ಇಲ್ಲಿಗೆ ಯಾವಾಗ ಬಂದೆ"?

"ಇಗೋ, ಈಗ ರೈಲಿನಿಂದ ಬರುತ್ತಿದ್ದೇನೆ".

"ನಡಿ ಮೊದಲು ಮನೆಗೆ ಹೋಗೋಣ. ಹೋಗುತ್ತಾ ಮಾತ ನಾಡೋಣ" ಎಂದು ಶಾಲನ್ನು ಸರಿಮಾಡಿಕೊಂಡು ಹೊರಟರು.

ಮನೆಗೆ ತಲುಪುವ ಹೊತ್ತಿಗೆ ಶಿವರಾಮಯ್ಯನವರು ತಮ್ಮನ ಕೂಡ ಉಂಟಾದ ಭಿನ್ನಾಭಿಪ್ರಾಯಕ್ಕೋಸ್ಕರ ಆಸ್ತಿಯೆಲ್ಲವನ್ನೂ ಆತನಿಗೆ ಬಿಟ್ಟು

ಸೋಮಪುರಕ್ಕೆ ಬಂದುದೂ, ಅಲ್ಲಿಯ ಶಾಲೆಯಲ್ಲಿ ಬರುವ ಪ್ರತಿಫಲದ ವಿವರಗಳೂ, ಟಾನಸ್ಲೇಯವರ ಪರಿಚಯ, ಈಗ ವಿಜಯಪುರಕ್ಕೆ ಬಂದಿರುವ ಕಾರಣ ಕೂಲಂಕಷವಾಗಿ ವಿಚಾರಿಸಲ್ಪಟ್ಟವು. ರಾಮುಪು ಓದಿ ಎಲ್ಲಾ ಪರೀಕ್ಷೆಗಳಲ್ಲೂ ಮೊದಲನೆಯ ಸಲಕ್ಕೆ ಉತ್ತೀರ್ಣನಾಗುತ್ತಾ ಬಂದುದೂ ಓದು ಮುಗಿದ ಮೇಲೆ ಕೆಲಸಕ್ಕಾಗಿ ಅಲೆದಾಡಿದುದೂ, ಬಂಧುಗಳೊಬ್ಬರ ಶಿಫಾರಸ್ಸಿನ ಮೇಲೆ ಕೆಲಸವಾದದ್ದೂ ರಾಮುವಿನ ಸೌಜನ್ಯ, ಅಧಿಕಾರಿಗಳು ಅವನ ಮೇಲಿಟ್ಟಿರುವ ವಿಶ್ವಾಸ ತತ್ಪರಿಣಾಮವಾಗಿ ಅವನಿಗೆ ಮೇಲೆ ಮೇಲೆ ಸಿಕ್ಕುತ್ತಿರುವ ಬಡ್ತಿಗಳೂ ತಿಳಿಸಲ್ಪಟ್ಟವು.

ನಂಜಪ್ಪನವರು ಶಿವರಾಮಯ್ಯನವರ ತಂದೆಯ ತಮ್ಮ. ರಾಮು ಸ್ವಾಮಿ ಅವರ ಒಬ್ಬನೇ ಮಗ. ಶಿವರಾಮಯ್ಯನವರಿಗಿಂತ ಪತ್ತು ಹನ್ನೆರಡು ವರ್ಷ ಚಿಕ್ಕವನು. ನಂಜಪ್ಪನವರ ಪತ್ನಿ ಗೌರಮ್ಮನವರು ಬಹಳ ಸರಳ ಹೃದಯದವರು. ನಂಟರಿಷ್ಟರೆಂದರೆ ಪ್ರಾಣ. ಶಿವ ರಾಮಯ್ಯನವರನ್ನು ಕಾಣುತ್ತಲೇ ಅವರಿಗೆ ಆದ ಆನಂದ ಇಷ್ಟೆಂದು ಹೇಳಲಳವಲ್ಲ. "ಯಾವಾಗ ಬಂದೆ? ಕಾಗದ ಏಕೆ ಬರೆಯಲಿಲ್ಲ? ಲಕ್ಷ್ಮೀ ಎಲ್ಲಿ? ಮಕ್ಕಳು ಎಷ್ಟು? ಊರಕಡೆ ಎಲ್ಲಾ ಸೌಖ್ಯವೇ?" ಎಂಬ ಪ್ರಶ್ನೆಗಳ ಸುರಿಮಳೆಯಾಯಿತು. ಎಲ್ಲಕ್ಕೂ ಉತ್ತರ ಹೇಳಿ, ತಮ್ಮ ಗಂಟನ್ನು ಬಿಚ್ಚಿ 'ಮುಸುರೆಯಿಲ್ಲದ' ತಿಂಡಿಯ ಗಂಟನ್ನು ತೆಗೆದು ಗೌರಮ್ಮನವರು ಎತ್ತಿ ಕೊಂಡಿದ್ದ ಸುಮಾರು ಎರಡು ವರುಷದ ಮಗುವಿಗೆ ತೋರಿಸುತ್ತಾ ತಮ್ಮ ಹತ್ತಿರ ಬಂದರೆ ಕೊಡುತ್ತೇನೆಂದು ಆಸೆ ತೋರಿಸಿ, ಅಪರಿಚಿತರ ಹತ್ತಿರಕ್ಕೆ ಹೋಗಲು ಇದ್ದ ಹೆದರಿಕೆ ತಿಂಡಿಯ ಮೇಲಿನ ಆಸೆಗಿಂತ ಕಡಿಮೆಯಾಗಲು, ಆಸೆಯನ್ನೂ ನಾಚಿಕೆಯನ್ನೂ ಕಣ್ಣುಗಳಲ್ಲಿ ಸೂಸುತ್ತ ನಿಧಾನವಾಗಿ ಹತ್ತಿರಕ್ಕೆ ಬಂದ ಮಗುವನ್ನು ಎತ್ತಿಕೊಂಡು ಕೈಗೆ ತಿಂಡಿಯನ್ನು ಕೊಟ್ಟು ಸ್ನೇಹಕ್ಕೆ ಪ್ರಾರಂಭಿಸಿದರು.

"ಏನೋ ಪೋಕರಿ, ನಮ್ಮ ಅಣ್ಣ ತಂದಿರುವ ತಿಂಡಿಯನ್ನೆಲ್ಲಾ ಒಬ್ಬನೇ ತಿಂದು ಬಿಡುತ್ತೀಯಾ" ಎಂದು ಹೇಳುತ್ತಾ ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಹೊರಗೆ ಬಂದ ರಾಮಸ್ವಾಮಿ "ಏಳು ಶಿವಣ್ಣ, ಮೊದಲು

ಸ್ನಾನ ಸಂಧ್ಯಾವಂದನೆ ಆಗಲಿ. ಅಷ್ಟು ಹೊತ್ತಿಗೆ ಅಣ್ಣನೂ ದೇವರ ಪೂಜೆ ಮಾಡಿಕೊಂಡು ಬರುತ್ತಾನೆ. ಆಮೇಲೆ ಮಗನನ್ನು ಮುದ್ದಾಡುವಿಯಂತೆ" ಎಂದು ಹೇಳಿ ಮಗನನ್ನು ಕರೆದುಕೊಂಡರು.

ತಿಂಡಿಯನ್ನು ತಿನ್ನುತ್ತಾ ಮನೆಯವರೆಲ್ಲರಿಗೂ ಶಿವರಾಮಯ್ಯನವರು ವಿಜಯಪುರಕ್ಕೆ ಬಂದ ಉದ್ದೇಶ ತಿಳಿಸಲ್ಪಟ್ಟಿತು. ರಾಮಸ್ವಾಮಿಯ ಸಲಹೆಯಂತೆ ಆಗಲೇ ಟಾನಸ್ಲೇಯವರ ಮನೆಗೆ ಹೋಗಿ ಬರುವಂತೆ ನಿರ್ಧಾರವಾಯಿತು. ನಂಜಪ್ಪನವರು ಜೊತೆಯಲ್ಲಿ ಹೊರಟು ಬಂಗಲೆಯವರೆವಿಗೂ ಬಂದು, ಅಲ್ಲಿಂದ ತಮ್ಮ ನಿತ್ಯದ ಪದ್ಧತಿಯಂತೆ ಪೇಟೆಗೆ ಹೊರಟರು. ಎಡಗೈಯಲ್ಲಿ ತಮ್ಮ ಗ್ರಂಥವನ್ನು ಹಿಡಿದುಕೊಂಡು, ಶಿಕ್ಷೆಯನ್ನನುಭವಿಸಲು ಬರುವಂತೆ ಕರೆಯಲ್ಪಟ್ಟಿರುವ ಬಾಲಕನು ಉಪಾಧ್ಯಾಯರ ಬಳಿಗೆ ಹೋಗುವಂತೆ ಶಿವರಾಮಯ್ಯನವರು ಆವರಣದ ಬಾಗಿಲನ್ನು ತೆರೆದು ಬಂಗಲೆಗೆ ಪ್ರವೇಶಿಸಿದರು.

೭

ಟಾನಸ್ಲೇಯವರ ಕೊಠಡಿ ವಿಶಾಲವಾಗಿತ್ತು. ನೆಲಕ್ಕೆ ಪೂರ್ತ ರತ್ನಗಂಬಳಿಗಳನ್ನು ಹಾಸಿದ್ದರು. ಮಧ್ಯದಲ್ಲಿ ಒಂದು ದುಂಡು ಮೇಜು. ಅದರಮೇಲೆ ಹಸುರು ಬಣ್ಣದ ಅಂದವಾದ ಬಟ್ಟೆ. ಒಂದು ಪುಷ್ಪದಾನಿ. ಅದರಲ್ಲಿ ಆಗತಾನೇ ಕೊಯ್ದುತಂದ ಚಿತ್ತಾಕರ್ಷಣೀಯವಾಗಿ ಜೋಡಿಸಲ್ಪಟ್ಟಿರುವ ಬಗೆಬಗೆಯ ಬಣ್ಣದ ಸುಗಂಧ ಕುಸುಮಗಳು. ಸುತ್ತಲೂ ಬೆತ್ತದ ಕುರ್ಚಿಗಳು, ಮೆತ್ತೆಯಿಂದ ಆವೃತವಾದ ಸುಖಾಸನಗಳು. ಒಂದು ಮೂಲೆಯಲ್ಲಿ ಇನ್ನೊಂದು ಸಾಧಾರಣ ಮೇಜು. ಅದರ ಮೇಲೆ ಹಸುರು ಬಣ್ಣದ ಉಣ್ಣೆಯ ಬಟ್ಟೆ. ಹೇಗೆ ಬೇಕಾದರೆ ಹಾಗೆ ಮುಖಮಾಡಿ ಕುಳಿತುಕೊಳ್ಳಲು ಅನುಕೂಲವಾಗುವಂತಹ ಮೆತ್ತೆಯಿಂದ ಆವೃತವಾದ ದುಂಡು ತಿರುಗಣೀ ಕುರ್ಚಿ. ಮೇಜಿನ ಮೇಲುಭಾಗದ ಗೋಡೆಯಲ್ಲಿ ಮೊಳೆಗಳಿಂದ ಭದ್ರಪಡಿಸಲ್ಪಟ್ಟಿರುವ ಹಳದಿಯ ಅಂಚಿನ ಅಚ್ಚ ಕಪ್ಪು ಚೌಕ. ಅದರ ಮಧ್ಯಭಾಗದಲ್ಲಿ ಅಮೇರಿಕಾ ದೇಶದಲ್ಲಿ ಟಾನಸ್ಲೇಯವರ

ಸಂಸ್ಥಾನದ ಹೆಸರು. ಆ ಬಟ್ಟೆಯ ಮೇಲುಭಾಗದಲ್ಲಿ ಅಮೇರಿಕದವರೆಲ್ಲರಿಂದ ತಮ್ಮ ದೇಶದ ಅತಿಶ್ರೇಷ್ಠ ಪ್ರಜೆಯೆಂದು ಗೌರವಿಸಲ್ಪಡುತ್ತಿರುವ ಜಾರ್ಜ್ ವಾಷಿಂಗ್‌ಟನ್ನರ ದೊಡ್ಡ ಪಟ. ಮೇಜಿನ ಬಲಭಾಗದಲ್ಲಿ ಸಾಲು ಸಾಲಾಗಿ ಇಡಲ್ಪಟ್ಟಿರುವ ಪುಸ್ತಕಗಳಿಂದ ತುಂಬಿರುವ ಒಂದು ಗಾಜಿನ ಬಾಗಿಲಿನ ಅಲಮಾರು. ಗೋಡೆಯ ಮೇಲೆ ಅಲ್ಲಲ್ಲೇ ಅಜ್ಞಾನಾಂಧಕಾರದಲ್ಲಿದ್ದ ತನ್ನ ಭ್ರಾತೃಗಳಿಗೆ ಬೆಳಕನ್ನು ತೋರಿಸಿದ ತಪ್ಪಿಗಾಗಿ ಪ್ರಾಣವನ್ನು ತೆತ್ತ ಏಸುವಿನ ಜೀವನದ ಮುಖ್ಯ ಸಂಗತಿಗಳನ್ನು ನೆನಪಿಗೆ ತರುವ ಚಿತ್ರಗಳು ತೂಗಾಡುತ್ತಿವೆ.

ಅಂಚೆಯು ಬಂದು ಸುಮಾರು ಅರ್ಧ ಗಂಟೆಯಾಗಿರಬಹುದು. ಟಾನಸ್ಲೇಯವರು ಧರ್ಮಪ್ರಸಾರ ಸಂಘಕ್ಕೆ ಸಂಬಂಧ ಪಟ್ಟ ಕಾಗದಗಳನ್ನೂ ತಮ್ಮ ಸ್ವಂತ ಕಾಗದಗಳನ್ನೂ ಪರಿಶೀಲಿಸಿ ಆಂಗ್ಲ ದೈನಂದಿನ ಪತ್ರಿಕೆಯನ್ನು ನೋಡುತ್ತ ಕುಳಿತಿದ್ದರು. ನೊಳ್ಳೆಗಳು ಒಳಗೆ ಬಾರದಿರಲೆಂತೆ ಹಾಕಿಸಿದ್ದ ತಂತಿ ಬಲೆಯ ಬಾಗಿಲುಗಳನ್ನು ಶಬ್ದವಾಗದಂತೆ ತೆಗೆದುಕೊಂಡು ಸೇವಕನೊಬ್ಬನು ಒಳಗೆ ಬಂದನು. ಅವನನ್ನು ನೋಡುತ್ತಲೇ ಪಾದ್ರಿಗಳು "ಮೆಥೂಸಲ" ಎಂದರು.

"ಹೊರಗೆ ಯಾರೋ ಬಂದಿದ್ದಾರೆ. ಸೋಮಪುರದವರಂತೆ. ಅಲ್ಲಿ ಉಪಾಧ್ಯಾಯರಂತೆ. ಹೆಸರು ಶಿವರಾಮಯ್ಯನಂತೆ. ತಮ್ಮನ್ನು ನೋಡಬೇಕಂತೆ".

ಪಾದ್ರಿಗಳು ತಟ್ಟನೆ ಕುರ್ಚಿಯಿಂದೆದ್ದರು. ತಾವೇ ತಂತಿಯ ಬಾಗಿಲ ಬಳಿಗೆ ಬಂದು ಬಾಗಿಲು ತೆಗೆದು ಹಿಡಿದುಕೊಂಡು "ನಮಸ್ಕಾರ, ದಯಮಾಡಬೇಕು. ಕಾಗದ ಬರೆದಿದ್ದರೆ ಸ್ಟೇಷನ್ನಿಗೆ ಬರುತ್ತಿದ್ದೆ". ಎಂದು ಮುಗುಳ್ನಗೆ ಯೊಡನೆ ಹೇಳಿ ಮೆಥೂಸಲನ ಕಡೆ ತಿರುಗಿ "ನೀನು ಹೋಗಿ ದೊರೆಸಾನಿಯವರಿಗೆ ಸ್ನೇಹಿಟರು ಬಂದಿದ್ದಾರೆ ದಯವಿಟ್ಟು ಬರಬೇಕು ಎಂದು ಹೇಳು" ಅಂದರು.

ಶಿವರಾಮಯ್ಯನವರನ್ನು ಒಂದು ಸುಖಾಸನದ ಮೇಲೆ ಕುಳ್ಳಿರಿಸಿ ತಾವೂ ಅದರ ಪಕ್ಕದ ಕುರ್ಚಿಯ ಮೇಲೆ ಕುಳಿತರು. ಅಷ್ಟು ಹೊತ್ತಿಗೆ

ಇನ್ನೊಂದು ಒಳಬಾಗಿಲಿಂದ ಬಂದ ಲಿಲ್ಲಿಯವರು ಮುಗುಳ್ನಗೆ ನಗುತ್ತಾ "ನೀವು ಬಂದುದು ಬಹಳ ಸಂತೋಷ. ನಿಮ್ಮ ಪತ್ನಿಯವರು ಚೆನ್ನಾಗಿದ್ದಾರೆಯೇ? ಕಾಗದ ಬರೆದಿದ್ದರೆ ನಿಮಗೆ ತೊಂದರೆ ಇರುತ್ತಿರಲಿಲ್ಲ. ನಿಮ್ಮ ಸಾಮಾನುಗಳೆಲ್ಲಿ. ಮೆಥೂಸಲ ತರುತ್ತಾನೆ. ಹೆಂಡ್ರಿಕ್ಸ್ ನೀವು ಬ್ರಾಹ್ಮಣ ಸ್ನೇಹಿತರ ಮನೆಗೆ ವಿಷಯ ತಿಳಿಸಿ. ಇಳಿದು ಕೊಳ್ಳಲು ಕೊಠಡಿ ಸರಿಮಾಡಿಸುತ್ತೇನೆ. ನಾನು ಹೊರಡಲೆ?" ಎಂದರು.

ಕ್ರೈಸ್ತ ದಂಪತಿಗಳ ಈ ಆದರ, ಅವರ ಈ ಭವ್ಯಗೃಹ ತಮ್ಮ ಗುಡಿಸಲು, ಇಲ್ಲಿಯ ರತ್ನಗಂಬಳಿಗಳ ಮೇಲಿನ ಕುರ್ಚಿ ಮೇಜುಗಳು. ತಮ್ಮ ಮನೆಯ ಮಣ್ಣಿನ ನೆಲದಮೇಲಿನ ಹರಕು ಚಾಪೆ ಇಳಿಜಾರು ಮೇಜು ಇವುಗಳನ್ನು ಒಂದಕ್ಕೊಂದು ಮನಸ್ಸಿನಲ್ಲೇ ಹೋಲಿಸುತ್ತಿದ್ದ ಶಿವರಾಮಯ್ಯನವರು "ಟಾನಸ್ಲೇಯವರ ಕಾಗದದ ಸಹಾಯದಿಂದ ಮನೆಯನ್ನು ಸುಲಭವಾಗಿ ಕಂಡು ಹಿಡಿಯಬಹುದೆಂದು ತೋರಿತು. ನನ್ನಲ್ಲಿ ಹೆಚ್ಚು ಸಾಮಾನು ಏನೂ ಇರಲಿಲ್ಲ. ಆದುದರಿಂದ ಕಾಗದ ಬರೆಯಲಿಲ್ಲ. ಬೆಳಿಗ್ಗೆ ತಮ್ಮ ಮನೆಯ ಹತ್ತಿರ ಬಂದಾಗ ಇಲ್ಲಿ ನನ್ನ ಹತ್ತಿರದ ಸಂಬಂಧಿಗಳೊಬ್ಬರು ಸಿಕ್ಕಿದರು. ಅವರ ಮನೆಯಲ್ಲಿ ಇಳಿದುಕೊಂಡಿದ್ದೇನೆ. ಅವರು ಸಿಕ್ಕದಿದ್ದರೆ ತಮಗೆ ತೊಂದರೆ ಕೊಡಬೇಕಾಗಿತ್ತೋ ಏನೋ" ಎಂದರು.

"ಹಾಗೇನು. ನಮ್ಮ ಮನೆಯಲ್ಲೇ ಇರುತ್ತೀರೆಂದು ಸಂತೋಷದಿಂದ ಇದ್ದೆವು. ಮುಖ್ಯ ನಿಮಗೆ ಸುಖವಾಗಿದ್ದರೆ ಸರಿ. ನಿಮ್ಮ ನೆಂಟರ ಮನೆ ಎಲ್ಲಿ?"

"ಅವರ ಪರಿಚಯ ತಮಗೆ ಇರಬಹುದು. ತಮ್ಮ ಪರಿಚಯವಂತೂ ಅವರಿಗಿದೆ. ತಾವು ಅವರಿಗೆ ತಮ್ಮ ಆವರಣದಲ್ಲಿ ಹೂ ಕುಯ್ದುಕೊಳ್ಳಲು ಅನುಮತಿ ಕೊಟ್ಟಿರುವಿರಂತೆ. ಅವರ ಮನೆ ಅಂಚೆ ಕಚೇರಿಯ ಪಕ್ಕದಲ್ಲಿದೆ. ಅವರು ನನಗೆ ಚಿಕ್ಕಪ್ಪನಾಗಬೇಕು".

"ಆ ಮುದುಕರನ್ನು ನಾನು ಬಲ್ಲೆ. ದಿನ ದಿನವೂ ಸೂರ್ಯ ಹುಟ್ಟುವುದಕ್ಕೆ ಮುಂಚೆ ಬಹಳ ಭಕ್ತಿಯಿಂದ ಹೂ ಕುಯಿದುಕೊಂಡು ಹೋಗಿ ದೇವರಿಗೆ ಪೂಜೆಮಾಡುತ್ತಾರೆ. ದೇವರಿಗೆ ಸುವಾಸನೆಯ ಹೊಸ

ಹೂಗಳನ್ನು ಅರ್ಪಿಸುವುದು ಎಂತಹ ಒಳ್ಳೆಯ ಸಂಗತಿ. ಲಿಲ್ಲಿಯೂ ಕೂಡ ಅವರನ್ನು ನೋಡಿದಾರೆ. ಬಹಳ ಸಂತೋಷ. ತಮಗೆ ಅನುಕೂಲ ವಾದಾಗ ಪುಸ್ತಕ ತಂದರೆ ಮುಂದಲ ಕೆಲಸ ಮಾಡಬಹುದು".

"ಪುಸ್ತಕ ಜೊತೆಯಲ್ಲೇ ತಂದಿದ್ದೇನೆ. ಈಗ ಅವಕಾಶವಿದ್ದರೆ ನೋಡಬಹುದು. ಇಲ್ಲದಿದ್ದರೆ ತಾವು ಹೇಳಿದಾಗ ಬರುವೆನು".

"ಈಗ ನನಗೆ ಬೇರೆ ಕೆಲಸವೇನೂ ಇಲ್ಲ".

ಶಿವರಾಮಯ್ಯನವರು ಮೇಲೆ ಸುತ್ತಿದ್ದ ಬಟ್ಟೆಯನ್ನೂ ಒಳಗಿದ್ದ ಕಾಗದದ ಸುತ್ತನ್ನೂ ಬಿಚ್ಚಿ, ತಾಯಿಯು ಮಗುವನ್ನು ಇತರರ ಕೈಗೆ ಕೊಡುವಂತೆ ಪುಸ್ತಕವನ್ನು ಕೊಟ್ಟರು. ಟಾನಸ್ಲೇಯವರು ಅದನ್ನು ಕೈಗೆ ತೆಗೆದುಕೊಳ್ಳುತ್ತಲೇ ಅದರ ಜೊತೆಯಲ್ಲಿದ್ದ ಒಂದು ಲಕ್ಕೋಟೆ ಕೆಳಗೆ ಬಿದ್ದಿತು. ಟಾನಸ್ಲೇಯವರು "ಕ್ಷಮಿಸಿ" ಎಂದು ಹೇಳುತ್ತಾ ಅದನ್ನು ಎತ್ತಿ ಶಿವರಾಮಯ್ಯನವರ ಕೈಗೆ ಕೊಡಹೋದರು. ಆಗ ಅವರು "ಅದೂ ತಮಗಾಗಿಯೇ ಇಟ್ಟಿದೇನೆ. ತೆಗೆದುಕೊಳ್ಳಬೇಕು".

ಅದನ್ನು ಬಿಚ್ಚಿ ನೋಡಲು ಹತ್ತು ರೂಪಾಯಿನ ನೋಟು ಇದ್ದಿತು.

ಆಶ್ಚರ್ಯವನ್ನು ತೋರಿಸುತ್ತಾ ಪಾದ್ರಿಗಳು "ಇದೇನು" ಎಂದರು.

"ತಾವು ಕಳುಹಿಸಿದ ಹಣ. ನನ್ನ ಕೆಲಸಕ್ಕೆ ನಾನು ಬಂದಿದೇನೆ. ತಮಗೆ ಇದರಿಂದ ತೊಂದರೆ ಕೊಡಲು ನನಗೆ ಮನಸ್ಸಿಲ್ಲ".

"ಇದು ನನ್ನ ಸ್ವಂತ ಹಣವಲ್ಲ. ಪ್ರಸಾರ ಸಭೆಯದು. ಸಭೆಯ ನಿಯಮಗಳ ಪ್ರಕಾರ ಕೊಟ್ಟಿದೆ. ತಮ್ಮ ಗ್ರಂಥ ಒಪ್ಪಿದರೂ ಸರಿ, ಒಪ್ಪ ದಿದ್ದರೂ ಸರಿ. ತಾವು ಪುಸ್ತಕ ಅಚ್ಚು ಹಾಕಿಸಲು ಕೊಟ್ಟರೂ ಸರಿ ಇಲ್ಲದಿದ್ದರೂ ಸರಿ. ಇದನ್ನು ತಾವು ತೆಗೆದುಕೊಳ್ಳುವುದರಿಂದ ಯಾವ ಹಂಗಿಗೂ ಸಿಕ್ಕಿಕೊಳ್ಳುವುದಿಲ್ಲ. ದಯವಿಟ್ಟು ಇಟ್ಟುಕೊಳ್ಳಿ. ಇದು ಸಾಲದೇ ಬಂದರೆ ಹೆಚ್ಚು ಖರ್ಚೆಲ್ಲಾ ಸಭೆಯು ಕೊಡುತ್ತದೆ". ಎಂದು

ಹೇಳುತ್ತಾ ಲಿಲ್ಲಿಯವರಕಡೆ ಅರ್ಥಗರ್ಭಿತವಾದ ದೃಷ್ಟಿಯಿಂದ ನೋಡುತ್ತಾ ಲಕ್ಕೋಟೆಯನ್ನು ನೋಟು ಸಹಿತ ಶಿವರಾಮಯ್ಯನವರ ಕೈಲಿಟ್ಟರು.

ಲಿಲ್ಲಿಯವರೂ "ತಾವು ತೆಗೆದು ಕೊಳ್ಳದಿದ್ದರೆ ನಮಗೆ ಬಹಾಲ ಸಂಕೋಚ. ಬೇಡ ಅನ್ನಬೇಡಿರಿ" ಅನ್ನಲು ಶಿವರಾಮಯ್ಯನವರಿಗೆ ಬೇರೆ ದಾರಿ ತೋರಲಿಲ್ಲ.

ಟಾನಸ್ಲೇಯವರು ಮೇಜಿನ ಮೇಲಿದ್ದ ಕೈ ಗಂಟೆಯ ಗುಂಡಿಯನ್ನು ಎರಡು ಸಲ ಅಮುಕಿದರು. ಗಂಟೆಯ ಸದ್ದು ಅಡಗುವುದರಲ್ಲಿ ಮೆಥೂ ಸಲನು ಬಂದು ನಿಂತನು.

"ಮುದ್ರಾಶಾಲೆಯ ಮುಖ್ಯಸ್ಥರನ್ನು ದಯವಿಟ್ಟು ಸ್ವಲ್ಪ ಬಂದು ಹೋಗಬೇಕೆಂದು ಹೇಳಿ" ಎಂದು ಕಳುಹಿಸಿ, ಗ್ರಂಥವನ್ನು ಕೈಗೆ ತೆಗೆದುಕೊಂಡು ಹಾಳೆಗಳನ್ನು ತಿರುವಿಹಾಕುತ್ತಾ ಪತ್ನಿಯನ್ನು ನೋಡಿ "ನಾವು ಕನ್ನಡ ಚನ್ನಾಗಿ ಕಲಿತದ್ದಕ್ಕೆ ಗುರುತು ಇಂತಹ ಪುಸ್ತಕಗಳನ್ನು ಓದುವುದು. ಈಗ ಈ ಪುಸ್ತಕ ನಮ್ಮ ಕೈಲಿರುವುದು ನಮ್ಮ ಮುನ್ಷಿಗಳು ಹೇಳಿದ ಗಾದೆಯಂತೆ. ಗಾದೆ ಏನು ಹೇಳುತ್ತೀರಾ?" ಎಂದರು.

ಲಿಲ್ಲಿಯವರು ನಗುತ್ತಾ "ಪುಸ್ತಕ ನನ್ನ ಕೈಗೆ ಕೊಡಿರಿ. ಆಗ ಗಾದೆ ತಿಲಿಸುತ್ತೇನೆ" ಎಂದರು.

"ಏಕೆ?"

"ಆಗ ಗಾದೆ ಸರಿಯಾಗಿ ಹೊಂದುತ್ತದೆ".

"ನೀವು ಬಹಳ ಜಾಣೆ. ತಮಗೆ ಆಗಲೇ ಗೊತ್ತು ಅಲ್ಲವೇ?"

ಶಿವರಾಮಯ್ಯನವರಿಗೆ ಸ್ವಲ್ಪ ತೊಂದರೆಗಿಟ್ಟುಕೊಂಡಿತು. ಗಾದೆ ತಮಗೆ ಗೊತ್ತಿಲ್ಲವೆಂದು ಹೇಳಿದರೆ ಸುಳ್ಳು ಮಾತಾಗುತ್ತದೆ. ಹೇಳಲು ಸಾಧ್ಯವಿಲ್ಲ. ಏನು ಮಾಡುವುದು ಎಂದು ಯೋಚಿಸುತ್ತಿರುವಾಗ ಟಾನಸ್ಲೇಯವರೇ ನಗುತ್ತ "ಮಂಗನ ಕೈಲಿ ಮಾಣಿಕ್ಯಾ ಕೊಟ್ಟಹಾಗೆ ಅಲ್ಲವೇ?" ಎಂದರು.

ಅಷ್ಟು ಹೊತ್ತಿಗೆ ಮುದ್ರಣಾಲಯದ ಮುಖ್ಯಸ್ಥರು ಒಳಗೆ ಬಂದರು. ಪಾದ್ರಿಯವರು ಅವರಿಗೆ ಒಂದು ಕುರ್ಚಿಯನ್ನು ತೋರಿಸಿ ಅವರು ಅದರಲ್ಲಿ ಕುಳಿತುಕೊಳ್ಳುತ್ತಲೇ ಅವರಿಗೆ ಶಿವರಾಮಯ್ಯನವರ ಪರಿಚಯವನ್ನು ಮಾಡಿಕೊಟ್ಟು ತಮ್ಮ ಕೈಲಿದ್ದ ಗ್ರಂಥವನ್ನು ಅವರಿಗೆ ಕೊಟ್ಟರು. ಅವರು ಅಲ್ಲಿ ಸ್ವಲ್ಪ ಇಲ್ಲಿ ಸ್ವಲ್ಪ ಓದಿ "ಶಿವರಾಮಯ್ಯನವರು ಒಪ್ಪಿದರೆ ಗ್ರಂಥವನ್ನು ಸೋಮಶರ್ಮರಿಗೆ ಕಳುಹಿಸಬಹುದು" ಎಂದರು.

ಟಾನಸ್ಲೇಯವರು ಅವರ ಕಡೆ ನೋಡಲು ಶಿವರಾಮಯ್ಯನವರು "ಅಗತ್ಯವಾಗಿ ಆಗಬಹುದು" ಎಂದರು.

"ಅವರ ಮನೆ ನನಗೆ ಗೊತ್ತು. ನಿಮಗೆ ಅವಕಾಶ ಇದ್ದರೆ ಬನ್ನಿ. ಹೋಗಿ ಬರೋಣ. ಲಿಲ್ಲಿ ನಿಮಗೆ ಬರಲು ಅವಕಾಶ ಉಂಟೋ?"

"ನನಗೂ ಬರಲು ಇಷ್ಟ. ಆದರೆ ಈಗ ಆಸ್ಪತ್ರೆಯಲ್ಲಿ ರೋಗಿಗಲು ಕಾದಿರುತ್ತಾರೆ. ಏನು ಮಾಡಲಿ. ಬರಲು ಆಗುವುದಿಲ್ಲ. ತಾವು ಹೋಗಲು ಆಗುತ್ತದೆಯೇ?"

"ನನಗೆ ಬೇರೆ ಏನು ಕೆಲಸ. ಇದು ಎಷ್ಟು ಜಾಗ್ರತೆ ಮುಗಿದರೆ ಅಷ್ಟು ಜಾಗ್ರತೆ ಊರಿಗೆ ಹಿಂದಿರುಗ ಬಹುದು. ತಮ್ಮ ಯಜಮಾನರಿಗೆ ಈಗ ಅವಕಾಶವಿದ್ದರೆ ನಾನು ಹೊರಡಲು ಸಿದ್ಧನಾಗಿದ್ದೇನೆ".

"ಓಹೋ? ನಾನು ಸಿದ್ಧ. ಜಾನಯ್ಯನವರೇ, ದಯವಿಟ್ಟು ಈ ಪುಸ್ತಕದ ವಿಚಾರ ನಮ್ಮ ಪುಸ್ತಕಗಳಲ್ಲಿ ಬರಕೊಂಡು ಸೋಮಶರ್ಮರಿಗೆ ಒಂಡು ಕಾಗಡ ಬರೆಡು ಕೊಡಿ. ಅಷ್ಟು ಹೊಟ್ಟಿಗೆ ನಾನು ಮೋಟರ್ ಸಿದ್ಧಮಾಡುತ್ತೇನೆ" ಎಂದು ಎದ್ದರು.

೮

ಪಾದ್ರಿಯವರ ಮೋಟಾರು ಸೋಮಶರ್ಮರ ಮನೆಯ ಮುಂದೆ ನಿಂತಿತು. ಆ ಶಬ್ದ ಕೇಳುತ್ತಲೇ ಬೀದಿಯ ಬಾಗಿಲನ್ನು ತೆಗೆದುಕೊಂಡು ರಂಗನು ಹೊರಗೆ ಬಂದನು. ಗಾಡಿಯ ಬಾಗಿಲನ್ನು ತೆಗೆದು ಪಾದ್ರಿಯವರು

ಹೊರಗೆ ಇಳಿದರು. ಶಿವರಾಮಯ್ಯನವರು ಹೊರಗೆ ಇಳಿಯುವವರೆಗೂ ಬಾಗಿಲನ್ನು ತೆರೆದು ಹಿಡಿದು ನಿಂತರು. ಆಮೇಲೆ ರಂಗನನ್ನು ಕೈ ಸನ್ನೆಯಿಂದ ಕರೆದು "ಸೋಮಶರ್ಮರು ಇದ್ದಾರೆಯೇ?" ಎಂದು ಕೇಳಿದರು.

"ಅವ್ರೆ ಬುದ್ಧಿ".

"ಹಾಗಾದರೆ ಅವರಿಗೆ ಈ ಚೀಟಿ ತೋರಿಸು" ಎಂದು ತಮ್ಮ ವಿಳಾಸದ ಚೀಟಿಯನ್ನು ಅವನ ಕೈಲಿಟ್ಟರು.

ರಂಗನು ಓಡೋಡುತ್ತ ಒಳಕ್ಕೆ ಹೋಗಿ ಅದಕ್ಕೂ ಹೆಚ್ಚಾದ ವೇಗದಲ್ಲಿ ಹೊರಗೆ ಬಂದು "ಒಳಕ್ಕೆ ದಯಮಾಡಿಸಬೇಕು" ಎಂದನು.

ಇಬ್ಬರೂ ಶರ್ಮರ ಕೊಠಡಿಯನ್ನು ಪ್ರವೇಶಿಸಿದರು. ಬಾಗಿಲ ಎದುರಿಗೆ ಒಂದು ರತ್ನಗಂಬಳಿ. ಅದರ ಮೇಲೊಂದು ಜಿಂಕೆಯ ಚರ್ಮ ಮುಂದುಗಡೆ ಇಳಿಜಾರು ಮೇಜು. ಮೇಲಿನ ಗೋಡೆಯಲ್ಲಿ ಭಗೀರಥ ಮಹಾರಾಜನು ಅಸಮಾನ ಪ್ರಯತ್ನದಿಂದ ತಂದ ಗಂಗೆಯು ಸ್ವರ್ಗ ಸುಖವು ತನಗೆ ತಪ್ಪಿತೆಂದೋ ಇಲ್ಲವೇ ಪುಣ್ಯವಂತರಿಗೇ ಲಭ್ಯವಾಗಿದ್ದ ತಾನು ಈಗ ಪಾಪಿಗಳಿಗೂ ಕೂಡ ಸುಲಭ ಸಾಧ್ಯಳಾಗಿ ತನ್ನ ಗೌರವಕ್ಕೆ ಹಾನಿ ಬಂತೆಂಬ ಕೋಪದಿಂದಲೋ ಭೂಮಿಯನ್ನೇ ಭೇದಿಸಿ ಬಿಡುವೆನೆಂದು ರಭಸದಿಂದ ಇಳಿಯಲು ಅಂದಿನ ಭಕ್ತನನ್ನೂ ಮುಂದಿನ ಮಾನವ ಕೋಟಿಯನ್ನೂ ರಕ್ಷಿಸಲೋಸುಗ ಕೇಶರಾಶಿಯನ್ನು ಬಿಚ್ಚಿ ನಿಂತಿರುವ ಪರಶಿವನ ಪಟ. ಎದುರು ಗೋಡೆಯಲ್ಲಿ ವೀಣಾಪುಸ್ತಕಧಾರಿಣಿಯಾಗಿ ತಿಳಿಯಾಗಿ ಹರಿಯುತ್ತಿರುವ ಹೊಳೆಯ ತೀರದಲ್ಲಿ ತರುಲತೆಗಳ ಮಧ್ಯದಲ್ಲಿ ಕುಳಿತಿರುವ ಸರಸ್ವತಿಯ ಪಟ. ಅದರ ಎಡ ಬಲ ಭಾಗಗಳಲ್ಲಿ ಲಕ್ಷ್ಮೀ ಗಾಯಿತ್ರೀ ದೇವಿಯರ ಪಟಗಳು. ಎಡ ಬಲ ಭಾಗಗಳ ಗೋಡೆಗಳಲ್ಲಿ ಪ್ರಪಂಚದ ಉದ್ಧಾರಕ್ಕಾಗಿ ಮಹಾ ವಿಷ್ಣುವು ಮಾಡಿದ ದಶಾವತಾರದ ಚಿತ್ರಗಳು. ಈ ಸ್ವರ್ಗ ಲೋಕದಿಂದ ಮರ್ತ್ಯ ಲೋಕಕ್ಕಿಳಿದರೆ ಗೋಡೆಯ ಬುಡದಲ್ಲಿ ಎರಡು ಕಡೆಯೂ ಸಾಲಾಗಿ ಬೆತ್ತದ ಕುರ್ಚಿಗಳು. ಕುರ್ಚಿಗಳ

ಸಾಲುಗಳ ಮಧ್ಯದಲ್ಲಿ ಪ್ರಿಯವಾದ ಬಣ್ಣಗಳಿಂದ ಚಿತ್ರಿಸಲ್ಪಟ್ಟಿರುವ ರತ್ನ ಗಂಬಳಿ. ಕೊಠಡಿಯ ನಾಲ್ಕು ಮೂಲೆಗಳಲ್ಲಿಯೂ ಪುಸ್ತಕಗಳಿಂದ ತುಂಬಿದ ನಾಲ್ಕು ಅಲಮಾರುಗಳು.

ಶರ್ಮರು ಬಾಗಿಲ ಹತ್ತಿರ ಬಂದು "ದಯಮಾಡಬೇಕು" ಎಂದು ಹೇಳುತ್ತಾ ಒಬ್ಬೊಬ್ಬರಿಗೂ ಒಂದೊಂದು ಆಸನವನ್ನು ತೋರಿಸಿ ಅವರು ಅಲ್ಲಿ ಕುಳಿತುಕೊಳ್ಳುತ್ತಲೂ ತಾವು ಹೋಗಿ ಜಿಂಕೆಯ ಚರ್ಮದ ಮೇಲೆ ಕುಳಿತುಕೊಂಡರು.

ಟಾನಸ್ಲೇಯವರು ಮಾತಿಗೆ ಪ್ರಾರಂಭಿಸಿದರು "ತಮ್ಮನ್ನು ನೋಡಿ ಬಹಳ ದಿನಗಳಾಗಿದ್ದುವು. ಇವರು ನನ್ನ ಸ್ನೇಹಿತರು. ಶಿವರಾಮಯ್ಯನವರೆಂದು ಹೆಸರು. ಸೋಮಪುರದಲ್ಲಿ ಬೋಧಕರಾಗಿದ್ದಾರೆ. ಇವರು ಒಂದು ಪುಸ್ತಕ ಬರೆದಿದ್ದಾರೆ. ಅದನ್ನು ತಾವು ಮೊದಲು ಪರಿಶೀಲಿಸಿ ತಮ್ಮ ಅಭಿಪ್ರಾಯ ಕೊಡಬೇಕೆಂದು ಪ್ರಾರ್ಥನೆ. ಪುಸ್ತಕವನ್ನೂ ಮುದ್ರಾಶಾಲೆಯ ಪ್ರಾರ್ಥನಾ ಪತ್ರವನ್ನೂ ತಂದಿದೇನೆ".

"ಶಿವರಾಮಯ್ಯನವರ ಪರಿಚಯ ಲಾಭವನ್ನು ನನಗೆ ಮಾಡಿಕೊಟ್ಟುದಕ್ಕಾಗಿ ಕೃತಜ್ಞನಾಗಿದ್ದೇನೆ. ಅವರ ಗ್ರಂಥವನ್ನು ವಿಮರ್ಶಿಸುವ ಯೋಗ್ಯತೆ ನನ್ನಲ್ಲಿದೆಯೆಂದು ಧೈರ್ಯವಾಗಿ ಹೇಳಲಾರೆ. ಅವರ ಬೇರೆ ಯಾವ ಗ್ರಂಥಗಳು ಇದುವರೆಗೆ ಪ್ರಕಟವಾಗಿವೆ?"

"ಯಾವುವೂ ಇಲ್ಲ. ಇದಕ್ಕೂ ಅಚ್ಚು ಹಾಕಿಸಿಕೊಳ್ಳುವಷ್ಟು ಯೋಗ್ಯತೆ ಇಲ್ಲವೆಂಬುದೇ ನನ್ನ ಭಾವನೆ. ತಮ್ಮ ಅಮೋಘ ಕಾಲವನ್ನು ಈ ಗ್ರಂಥಾವಲೋಕನದಲ್ಲಿ ವ್ಯರ್ಥವಾಗಿ ವಿನಿಯೋಗಿಸುವುದು ನನಗೆ ಇಷ್ಟವಿಲ್ಲ. ಆದರೆ ಈ ನನ್ನ ಮಿತ್ರರು ಅದೇನು ಕಾರಣವೋ ತಮಗೆ ತೊಂದರೆ ಕೊಡಲು ಮನಸ್ಸುಮಾಡಿದ್ದಾರೆ".

"ಅಡಿಗೆ ಮಾಡಿದವರಿಗಿಂತ ಊಟ ಮಾಡುವವರಿಗೆ ಅಡಿಗೆಯ ರುಚಿ ಚೆನ್ನಾಗಿ ಗೊತ್ತಾಗುತ್ತದೆ. ಅಲ್ಲವೆ? ಅದರ ಸವಿಯನ್ನು ನಾನು ನೋಡಿ

ಇತರರಿಗೂ ಉಣಬಡಿಸಲೆಂದು ಟಾನಸ್ಲೇಯವರ ಅಭಿಪ್ರಾಯವೆಂದು ಕಾಣುತ್ತದೆ ".

" ಸರಿಯಾಗಿ ಅಪ್ಪಣೆ ಕೊಡಿಸಿದಿರಿ. ಈ ನನ್ನ ಸ್ನೇಹಿತರು ಬಹಾಲ ಸಂಕೋಚಡವರು ".

" ನಮ್ಮ ಕವಿಗಳಲ್ಲಿ ಎರಡು ತರಹ. ಒಂದು ಗುಂಪಿನವರು ನನಗೆ ಏನೂ ಬಾರದು. ಬರೆದಿರುವುದೆಲ್ಲಾ ಸರಸ್ವತಿಯ ಕರುಣದಿಂದ. ಗುಣಾವಗುಣಗಳೆಲ್ಲಕ್ಕೂ ಆಕೆಯೇ ಜವಾಬ್ದಾರಳು ಎಂದು ಹೇಳಿ ನುಸುಳಿಕೊಂಡು ಹೋಗಲು ಪ್ರಯತ್ನಪಡುತ್ತಾರೆ. ಇನ್ನೊಂದು ಗುಂಪಿನವರು ಕವಿಗಳಿಗೆ ಮೇಲ್ಪಂಕ್ತಿಯಾಗುವಂತೆ ಕಾವ್ಯವನ್ನು ರಚಿಸಿದ್ದೇನೆ. ಇದು ರಸಗಳಿಗೆ ಗಣಿ. ನಿಮಗೆ ಶಕ್ತಿಯಿದ್ದಷ್ಟು ರಸಾಸ್ವಾದನೆ ಮಾಡಿ. ರಸದ ರುಚಿ ನಾಲಿಗೆಗೆ ಸಿಕ್ಕದಿದ್ದರೆ ಕಾವ್ಯವನ್ನು ಹಳಿಯಬೇಡಿ. ಜ್ಞಾನ ಗರುಡಿಯಲ್ಲಿ ಇನ್ನಷ್ಟು ಸಾಮು ಮಾಡಿ ಶಕ್ತಿಸಂಪಾದಿಸಿ. ರಸ ಹೀರುವಿರಿ. ಎಂದು ಭುಜವನ್ನು ಅಪ್ಪಳಿಸುತ್ತಾರೆ. ಶಿವರಾಮಯ್ಯನವರು ಮೊದಲ ಗುಂಪಿನವರು ".

" ತಿಳಿದವರ ಮುಂದೆ ಹೆಚ್ಚಿಗೆ ಹೇಳಲಾರೆ. ನನ್ನ ಯೋಗ್ಯತೆಯ ಆಳ ಸರಿಯಾಗಿ ಕಂಡು ಹಿಡಿದಿದ್ದೇನೆಯೇ ಇಲ್ಲವೇ ಎಂಬುದು ತಮಗೇ ವೇದ್ಯವಾಗುವುದು ".

" ನನ್ನ ಅಭಿಪ್ರಾಯ ತಮಗೆ ಎಂದು ತಿಳಿಸಬೇಕು ? "

" ಶಿವರಾಮಯ್ಯನವರು ನನಗೋಸ್ಕರ ಇಲ್ಲಿಗೆ ಬಂದಿದ್ದಾರೆ. ಹೆಚ್ಚು ದಿವಸ ನಿಲ್ಲಿಸಿಕೊಂಡರೆ ತೊಂದರೆಯಾಗಬಹುದು. ಇನ್ನು ಐದಾರು ದಿನಗಳಲ್ಲಿ ಕೊಡುವುದಾದರೆ ಬಹಾಳ ಉಪಕಾರ ".

" ಅವರು ನನ್ನ ಕುಟೀರದಲ್ಲಿ ಇಳಿದುಕೊಂಡು ನನಗೆ ಪಂಕ್ತಿ ಲಾಭವನ್ನು ಕೊಟ್ಟರೆ ಬಹಳ ಸಂತೋಷ ".

ಶಿವರಾಮಯ್ಯನವರು ನಗುತ್ತಾ "ಅಪರಾಧಿಗೆ ಮನೆಯಲ್ಲಿ ಊಟ ಉಪಚಾರ ಮಾಡಿಸುತ್ತಾ ಹಗಲೂರಾತ್ರಿ ಅವನನ್ನು ಮನೆಯಲ್ಲಿಟ್ಟು ಕೊಂಡಿರುವ ನ್ಯಾಯಾಧೀಶರು ಅಪರಾಧಿಗೆ ಹೇಗೆ ಕಾಠಿಣ್ಯವನ್ನು ತೋರಿ ಸಿಯಾರು? ಟಾನಸ್ಲೀಯವರು ಖಂಡಿತ ಇದಕ್ಕೆ ಒಪ್ಪರು, ಅಲ್ಲವೇ"?

"ನಿಜವಾದ ನ್ಯಾಯಾಧಿಪತಿ ಹಾಗೆ ಎಂದೂ ಮಾಡುವುದಿಲ್ಲ. ಇತರ ಕಾರಣಗಳು ಅವನ ತೀರ್ಪನ್ನು ಬದಲಾಯಿಸುವುದಿಲ್ಲ. ಈಗ ಶರ್ಮರ ತೀರ್ಪು ಅದಕ್ಕೆ ಇರುವ ಕಾರಣ ಎರಡೂ ಜನಗಳ ಮುಂದೆ ಇಡುತ್ತಾರೆ. ಆದ್ದರಿಂದ ನ್ಯಾಯಾಧೀಶರ ಸಂಬಂಧ ಒಂದು ಕಷ್ಟ. ಸುಖವಲ್ಲ".

"ಚನ್ನಾಗಿ ಹೇಳಿದಿರಿ. ಆದರೆ ಇಲ್ಲಿ ಅಪರಾಧಿಯೂ ಇಲ್ಲ. ನ್ಯಾಯಾಧೀಶನೂ ಇಲ್ಲ. ಆದುದರಿಂದ ಆ ಸಾಮ್ಯ ಅನ್ವಯಿಸುವುದಿಲ್ಲ. ಶಿವರಾಮಯ್ಯನವರು ಇಲ್ಲೇ ಇದ್ದರೆ ವಿಮರ್ಶನ ಕಾರ್ಯದಲ್ಲೂ ನನಗೆ ಸಹಾಯವಾಗಬಹುದು".

"ನಾನು ಸಂತೋಷದಿಂದಲೂ, ಕೃತಜ್ಞತೆಯಿಂದಲೂ ಒಪ್ಪಿಕೊಳ್ಳು ತ್ತಿದ್ದೆನು. ನಾನು ಈ ಊರಿಗೆ ಹೊಸಬ. ಆದರೆ ಇಲ್ಲಿಗೆ ಬಂದಮೇಲೆ ನನ್ನ ಹತ್ತಿರ ಸಂಬಂಧಿಗಳುಸಿಕ್ಕಿ ಅವರ ಮನೆಯಲ್ಲಿ ಇಳಿದುಕೊಂಡಿದ್ದೇನೆ. ಅದುದರಿಂದ ಯತ್ನವಿಲ್ಲ. ಕ್ಷಮಿಸಬೇಕು".

"ಇನ್ನು ಐದು ದಿನ ಬಿಟ್ಟು ಬರೋಣವೇ"?

"ಹಾಗೇ ಮಾಡಿರಿ".

ಟಾನಸ್ಲೀಯವರು ಮುದ್ರಣಾಲಯದ ಮುಖ್ಯಸ್ಥರ ಪತ್ರವನ್ನೂ ಶಿವರಾಮಯ್ಯನವರ ಗ್ರಂಥವನ್ನೂ ಶರ್ಮರ ಮುಂದಿಟ್ಟರು.

ಶರ್ಮರು "ತಮ್ಮಲ್ಲಿರುವುದು ಇದೊಂದೇ ಪ್ರತಿಯೋ?" ಎಂದರು.

"ಹೌದು. ಇದೊಂದೇ".

"ಆಗಲಿ ಇಂದು ಶನಿವಾರ. ತಾವು ಗುರುವಾರ ಬನ್ನಿ".

ಎಲ್ಲರೂ ಎದ್ದರು. ಸೋಮಶರ್ಮರು ಮೋಟಾರಿನವರೆಗೂ ಬಂದು ಪಾದ್ರಿಗಳನ್ನೂ ಶಿವರಾಮಯ್ಯನವರನ್ನೂ ಕಳುಹಿಸಿಕೊಟ್ಟರು.

೯

ಲಕ್ಷ್ಮೀದೇವಮ್ಮನವರಿಗೆ ಅಣ್ಣನ, ಅತ್ತಿಗೆಯ, ಸೋದರಸೊಸೆ, ಸೋದರಳಿಯಂದರ ಗುಂಪಿನಲ್ಲಿ ಒಂದೆರಡು ದಿನಗಳು ಒಂದೆರಡು ಕ್ಷಣಗಳಂತೆ ಕಳೆದುಹೋದುವು. ಆ ಮೇಲೆ ಪತಿಯ ಯೋಗಕ್ಷೇಮದ ಆಲೋಚನೆ ಪ್ರಾರಂಭವಾಯಿತು. 'ಇಳಿದುಕೊಳ್ಳಲು ಎಲ್ಲಿ ಸ್ಥಳ ಸಿಕ್ಕಿತೋ ಅಡಿಗೆ ಮಾಡಿಕೊಂಡು ಊಟಮಾಡಲು ಬೇಸರ ಪಟ್ಟುಕೊಂಡು ಎಷ್ಟು ಸಲ ಉಪವಾಸವಿದ್ದಾರೋ, ಬಹಳ ಸಂಕೋಚ ಪ್ರಕೃತಿಯವರು ಎಷ್ಟು ತೊಂದರೆ ಪಟ್ಟುಕೊಳ್ಳುತ್ತಿದ್ದಾರೋ' ಎಂದು ತವಕ ಪಟ್ಟಿಗ್ಗೂಪಟ್ಟಿದ್ದೀ. ಲಕ್ಷ್ಮೀದೇವಮ್ಮನವರ ಕಲ್ಪನಾ ಪ್ರಪಂಚದಲ್ಲಿ ಶಿವರಾಮಯ್ಯನವರು ಎರಡು ಮೂರು ದಿನಗಳು ಅನುಭವಿಸಿದಷ್ಟು ಕಷ್ಟಗಳನ್ನು ನಿಜಪ್ರಪಂಚದಲ್ಲಿ ಎರಡು ಮೂರು ವರ್ಷಗಳಲ್ಲಿಯೂ ಅನುಭವಿಸಿರಲಾರರು. ಅವರ ಮನಸ್ಸಿನ ಈ ತವಕ ಶಿವರಾಮಯ್ಯನವರಿಂದ ಕಾಗದ ಬಂದ ಮೇಲೆ ಬಹಳ ಕಡಮೆಯಾಯಿತು.

ಅತ್ತಿಗೆಯ ಜೊತೆಯಲ್ಲಿ ಸಿಹಿನೀರು ತರಲು ಕೆರೆಗೆ ಹೋಗಿದ್ದವರು ತಲೆಯಮೇಲೆ ಒಂದು ಸಣ್ಣ ಕರಗ, ಕಂಕುಳಲ್ಲಿ ಒಂದು ಸಣ್ಣ ಕರಗ ತೆಗೆದುಕೊಂಡು ಮುಖದಮೇಲೆ ಉಪ್ಪುನೀರಿನ ಎರಡು ಸಣ್ಣ ಕಾಲುವೆಗಳನ್ನು ಹರಿಸುತ್ತಾ ಮನೆಗೆ ಬಂದರು. ಶಾಮಣ್ಣನು ಅಂಚೆಯವನು ಕೊಟ್ಟು ಕಳುಹಿಸಿದ್ದ ಲಕ್ಕೋಟೆಯನ್ನು ಒಡೆದು ಕಾಗದವನ್ನು ನೋಡುತ್ತಾ ನಿಂತಿದ್ದನು. ಯಾವಾಗಲೂ ಶಿವರಾಮಯ್ಯನವರ ಧ್ಯಾನದಲ್ಲಿದ್ದ ಲಕ್ಷ್ಮೀದೇವಮ್ಮನವರು ಒಳಗೆ ಬಂದವರೇ "ಏನು ಕಾಗದ ಬಂದಿದೆ. ವಿಜಯಪುರದಿಂದಲೇ"? ಎಂದರು.

"ಪ್ರಶ್ನೆ ಹೇಳುವುದರಲ್ಲಿ ನೀನು ಬಹಳ ಜಾಣೆ ಹೌದು".

"ಎಂದು ಬರುತ್ತಾರಂತೆ"?

ರಾಮಣ್ಣನು ನಗುತ್ತಾ ಒಳಕ್ಕೆ ಬರುತ್ತಿದ್ದ ವೆಂಕಮ್ಮನವರನ್ನು ನೋಡಿ "ನೋಡಿದೆಯಾ! ಲಕ್ಷ್ಮೀ ಗಂಡನನ್ನು ನೋಡದೆ ನಾಲ್ಕಾರು ದಿನಗಳಾಗಿರುವಷ್ಟರಲ್ಲೇ ಗಂಡನ ಕಾಗದ ನೋಡಿ, ನೀರಿನ ಕೊಡಗಳನ್ನು ಇಳಿಸುವುದುಕೂಡ ಬಿಟ್ಟು ಯೋಗಕ್ಷೇಮ ಕೇಳಲು ನಿಂತುಬಿಟ್ಟಳು. ಅಲ್ಲಾ ಲಕ್ಷ್ಮೀ! ನಾನು ಊರು ಬಿಟ್ಟು ವಾರಗಟ್ಲೆ ಹಳ್ಳೀಮೇಲೆ ಹೋಗಿ ತಿರುಗಿ ಮನೆಗೆ ಬಂದಾಗ ಎಷ್ಟೋಸಲ ಇವಳು ನನ್ನನ್ನು ಮಾತುಕೂಡ ಆಡಿಸದೆ ಸೀನೀರಿನ ಕೊಡ ತೆಗೆದುಕೊಂಡು ಕೆರೆಗೆ ಹೋಗಿದ್ದಾಳೆ. ಅವಳಿಗೆ ಸ್ವಲ್ಪ ನಿನ್ನ ಗುಣ ಕಲಿಸಿದರೆ ಅಣ್ಣನಿಗೆ ಎಷ್ಟೋ ಉಪಕಾರ ಮಾಡಿದಂತಾಗುತ್ತದೆ".

ಲಕ್ಷ್ಮೀದೇವಮ್ಮನವರು ನೀರಿನ ಪಾತ್ರೆಗಳನ್ನು ಒಂದೊಂದಾಗಿ ಇಳಿಸುತ್ತಾ "ಬಿಡಣ್ಣಾ ನಿನ್ನ ಹಾಸ್ಯ. ಅತ್ತಿಗೆಯಂತಹ ಹೆಂಡತಿ ಸಿಕ್ಕಿದ್ದು ನಿನ್ನ ಪೂಜಾಫಲದಿಂದ. ಹೀಗೆಲ್ಲಾ ಅವಳನ್ನು ಅನ್ಯಾಯವಾಗಿ ಅನ್ನುತ್ತಾ ಇದ್ದರೆ ಮುಂದಲ ಜನ್ಮದಲ್ಲಿ ನಿಜವಾಗಿಯೂ ನೀನು ಹೇಳುತ್ತಾ ಇರುವ ಗುಣವುಳ್ಳ ಹೆಂಡತಿಯೇ ಸಿಕ್ಕುತ್ತಾಳೆ. ಕಾಗದದಲ್ಲಿ ಏನಿದೆ"?

"ಎಲ್ಲಾ ಕಾಗದಗಳಲ್ಲೂ ಇರುವುದೇ. ಅಕ್ಷರಗಳು, ಮಾತುಗಳು, ವಾಕ್ಯಗಳು".

"ಹೇಳುತ್ತೀಯೋ ಇಲ್ಲವಪ್ಪ. ನೀನು ಇಷ್ಟು ತಮಾಷೆಮಾಡೋದು ನೋಡಿದರೆ ಅವರು ಸುಖವಾಗಿದ್ದಾರೆಂತಾಯ್ತು. ಅಷ್ಟೇ ನನಗೆ ಬೇಕಾದ್ದು. ನಾನು ಒಳಗೆ ಹೋಗುತ್ತೇನೆ".

"ಅದಷ್ಟೇ ಅಲ್ಲ. ಸ್ವಾರಸ್ಯವಾದ ಇನ್ನೂ ಒಂದೆರಡು ವಿಷಯಗಳಿವೆ. ಈಗನೋಡು ಬಿಸಿಲು ಹತ್ತಿದೆ. ನೀನೂ ಕಷ್ಟಪಟ್ಟು ಬಂದಿದ್ದೀಯೆ. ನಾನೂ ಓದಬೇಕಾಗಿದೆ. ನಿನ್ನ ಮತ್ತು ನನ್ನ ಶ್ರಮ ಪರಿಹಾರಕ್ಕಾಗಿ ಆ ನಿನ್ನ ಸದಾಚಾರ ಸದ್ಗುಣ ಸಂಪನ್ನೆಯಾದ ಅತ್ತಿಗೆ ಹಿತ್ತಲು ನಿಂಬೇ

ಗಿಡಕ್ಕೆ ಒಂದೆರಡು ಪ್ರದಕ್ಷಿಣೆಮಾಡಿ ತತ್ಫಲವಾಗಿ ಸಿಕ್ಕುವ ಫಲಗಳನ್ನು ತಂದು ಕದಬಾಗಿಲ ಗೂಡಿನ ಮೂಲೇಲಿಟ್ಟಿರುವ ಡಬ್ಬೀಬುಡದಲ್ಲಿ ಒಂದೆರಡು ಏಲಕ್ಕಿ ಹುಡುಕಿ ತೆಗೆದು ಹೊಸ ಬೆಲ್ಲಹಾಕಿ ಸ್ವಲ್ಪ ಪಾನಕ ಅನ್ನೋ ಪದಾರ್ಥ ಮಾಡಿಕೊಡುತ್ತೀನಿ ಅಂತ ಒಪ್ಪಿಕೊಂಡರೆ ಧೈರ್ಯವಾಗಿ ಓದುತ್ತೇನೆ. ಕಷ್ಟಪಟ್ಟಿದ್ದಕ್ಕೆ ಆಕೆಗೂ ನಮ್ಮಂತಹ ಸದ್ಬ್ರಾಹ್ಮಣ ಸುವಾಸಿನಿಯರಿಗೆ ಬಿಸಿಲಿನ ವೇಳೆಯಲ್ಲಿ ಗುಡೋದಕ ದಾನಮಾಡಿದ್ದಕ್ಕೆ ಬರಬಹುದಾದ ಪುಣ್ಯದ ಜೊತೆಗೆ ಸಧ್ಯದಲ್ಲೂ ಸ್ವಲ್ಪ ಫಲ ದೊರೆಯಬಹುದು. ನನಗೆ ಕೊಟ್ಟಿದ್ದು ಏನಾದರೂ ಹೆಚ್ಚಾದರೆ ಲೋಟದ ಬುಡದಲ್ಲಿ ಸ್ವಲ್ಪ ಉಳಿಸಿ ಆಕೆಗೂ ಕೊಟ್ಟೇನು. ಏನು ಹೇಳುತ್ತಾಳೆ ಕೇಳು" ?

" ನೋಡು ಲಕ್ಷ್ಮೀ, ನನ್ನ ಅಣ್ಣನವರು ತಮ್ಮ ಬುದ್ಧಿವಂತಿಕೆಯನ್ನು ವಿದ್ವಾಂಸರು ತಲೆದೂಗಿಸುವಂತಹ ಗ್ರಂಥಗಳನ್ನು ರಚಿಸುವುದರಲ್ಲಿ ಉಪಯೋಗಿಸುತ್ತಾರೆ. ನಿನ್ನ ಅಣ್ಣ ಹೊಟ್ಟೆ ತೊಳಸಿ ತಲೆ ತಿರುಗುವಂತಹ ಹುಳಿಪಾನಕವನ್ನು ಯಾಚಿಸುವುದರಲ್ಲಿ ಅದನ್ನು ಉಪಯೋಗಿಸುತ್ತಾರೆ. ಇಲ್ಲವೇ, ನನ್ನ ಅಣ್ಣನವರ ಕಾಗದವನ್ನು ಗುಟ್ಟಿನಲ್ಲಿ ನಿನಗೊಬ್ಬಳಿಗೇ ಓದಿ ಹೇಳಲು ನನ್ನನ್ನು ಅಡಿಗೆ ಮನೆಗೆ ಅಟ್ಟುವ ಉದ್ದೇಶದಿಂದ ಹೀಗೆ ಹೇಳುತ್ತಾರೋ ? ಆಗಲಿ, ನಾನು ಹೋಗುತ್ತೇನೆ" ಎಂದು ಸುಳ್ಳು ಕೋಪವನ್ನು ಪ್ರಕಟಿಸುತ್ತಾ ವೆಂಕಮ್ಮನವರು ನಿಂಬೇಹಣ್ಣನ್ನು ಹುಡುಕಲು ಹಿತ್ತಲುಕಡೆಗೆ ಹೊರಟರು.

" ನೋಡಿದೆಯಾಣ್ಣ, ನಿನ್ನ ಹಾಸ್ಯ ಅತ್ತಿಗೆಯ ಮನಸ್ಸಿಗೆ ನೋವು ಮಾಡಿತು ".

" ಅವಳ ಕೋಪದಗುಟ್ಟು ನನಗೆ ಗೊತ್ತು. ಎರಡು ಲೋಟಾ ಪಾನಕದ ಬದಲು ನಾಲ್ಕು ಲೋಟಾ ಸಿಕ್ಕುತ್ತದೆ. ಕಾಗದ ಓದುತ್ತೇನೆ ಪಾನಕ ಕೇಳಿದ್ದು ಸರಿಯೋ ತಪ್ಪೋ ಕೇಳಿ ಹೇಳು" ? ಎಂದು ಕಾಗದ ಓದಲಾರಂಭಿಸಿದರು.



ವಿಜಯಪುರ
ಕಾರ್ತೀಕ ಶುದ್ಧ ಬಿದಿಗೆ

ಚಿ॥ ಶಾಮಣ್ಣನಿಗೆ ಆಶೀರ್ವಾದಗಳು—

ನಾನು ವಿಜಯಪುರಕ್ಕೆ ಸುಖವಾಗಿ ಬಂದು ಸೇರಿದೆನು. ಪಾದ್ರಿಯವರ ಮನೆ ಹುಡುಕುತ್ತಿರುವಾಗ ಅಲ್ಲೇ ನಮ್ಮ ಚಿಕ್ಕಪ್ಪ ನವರಾದ ನಂಜಪ್ಪನವರು ಸಿಕ್ಕಿದರು. ಅವರ ಮಗ ಚಿ॥ ರಾಮುವಿಗೆ ಅರಮನೆಯ ಕಛೇರಿಯಲ್ಲಿ ಒಂದು ತಕ್ಕಮಟ್ಟಿನ ದೊಡ್ಡ ಕೆಲಸ ಇದೆ. ಆದುದರಿಂದ ಊರಬಿಟ್ಟ ಪತಿಪತ್ನಿಯರಿಬ್ಬರೂ ಅವರವರ ತವರು ಮನೆಗೆ ಹೋದಂತಾಯಿತು. ಸೌಭಾಗ್ಯವತಿಗೆ ರಾಮುವಿನ ಪರಿಚಯ ಚನ್ನಾಗಿದೆ. ಹ॥ ಕುಂ॥ ಶೋ॥ ಮಾತೃಶ್ರೀ ಗೌರ ಚಿಕ್ಕಮ್ಮನು ಸೌಭಾಗ್ಯವತಿಯನ್ನು ಕರೆದುಕೊಂಡೇ ಬರಬೇಕಿತ್ತೆಂದು ದಿನಕ್ಕೊಂದೆರಡು ಸಲವಾದರೂ ಆಕ್ಷೇಪಿಸುತ್ತಾರೆ. ಅವರು ವಿಜಯ ಪುರದಲ್ಲಿರುವ ವಿಚಾರ ನನಗೆ ತಿಳಿದಿರಲಿಲ್ಲವೆಂದೂ ತಿಳಿದಿದ್ದರೆ ಹಾಗೆ ಮಾಡಬಹುದಾಗಿತ್ತೆಂದೂ ಎಷ್ಟು ಹೇಳಿದರೂ ಅವರು ಆಕ್ಷೇಪಿ ಸುವುದನ್ನು ಬಿಟ್ಟಿಲ್ಲ.

ಟಾನಸ್ಲೇಯವರು ನನ್ನನ್ನು ಬಹಳ ಆದರದಿಂದ ಬರಮಾಡಿ ಕೊಂಡರು. ನನ್ನ ಗ್ರಂಥವನ್ನು ಆಸ್ಥಾನ ವಿದ್ವಾಂಸರಲ್ಲಿ ಮೊದಲಿಗ ರೆಂದು ಪರಿಗಣಿಸಲ್ಪಟ್ಟಿರುವ ಸೋಮಶರ್ಮರೆಂಬ ವಿದ್ವಾಂಸರಿಗೆ ಪರಿಶೀಲನೆಗಾಗಿ ಕೊಟ್ಟಿರುವರು. ನನ್ನ ಹತ್ತಿರ ಇದ್ದ ಹಳದಿಯ ಗಟ್ಟಿಯು ಚಿನ್ನವೇ ಹಿತ್ತಾಳೆಯೇ ಎಂದು ಗೊತ್ತಾಗುವ ಸಮಯ ಒದಗಿದೆ. ಅದರಿಂದ ಮನಸ್ಸಿಗೆ ಒಂದು ತರಹ ಭೀತಿ. ಅದು ಹಿತ್ತಾಳೆಯೆಂದು ತೀರ್ಮಾನಿಸಲ್ಪಟ್ಟರೆ ಏನು ಮಾಡುವುದು. ಅನೇಕ ಸಲ ಈರೀತಿ ಯೋಚಿಸಿ ಒಂದು ನಿಶ್ಚಯಕ್ಕೆ ಬಂದಿದೇನೆ. ನಮ್ಮ ಊರಲ್ಲಿ ರಂಗಪ್ಪ ಎಂಬುವರೊಬ್ಬರಿದ್ದರು. ಅವರಿಗೆ ಮಕ್ಕಳಿರಲಿಲ್ಲ. ಅವರ ಕುಟುಂಬ ಎಲ್ಲಾ ದೇವರಿಗೂ ಹರಕೆ ಹೊತ್ತರು. ಕೊನೆಗೆ ಒಂದು ಮಗುವಾಯಿತು. ಅವರ ಸಂತೋಷ ಹೇಳ ತೀರದು.

ಮಗು ದೊಡ್ಡದಾಗುತ್ತಾ ಬಂತು. ಆಗ ಅದು 'ಮೂಗು' ಎಂದು ಗೊತ್ತಾಯಿತು. ಆದರೂ ಅವರಿಗೆ ಮಗುವಿನಮೇಲಿನ ಪ್ರೀತಿ ಕಡಮೆಯಾಗಲಿಲ್ಲ. ದೇವರು ಇಂತಹ ಮಗುವನ್ನು ಕೊಟ್ಟನೆಂದು ದುಃಖಿಸಲಿಲ್ಲ. ಅವರ ಮನಸ್ಸಿಗೆ ಸಂಕಟವಾಗುತ್ತಿದ್ದುದು ಯಾವಾಗ ಲೆಂದರೆ ಯಾರಾದರೂ ಮಗುವನ್ನು ನೋಡಿ ನಕ್ಕಾಗ ಇಲ್ಲವೇ ಕೃತಕ ಮರುಕವನ್ನು ತೋರಿದಾಗ. ನನ್ನ ಪುಸ್ತಕದ ವಿಚಾರ ತಿಳಿದಿರುವ ನನ್ನ ಆಪ್ತೇಷ್ಟರಾದ ನೀವುಗಳು ಅದರ ವಿಚಾರದಲ್ಲಿ ಈರೀತಿ ಮಾಡುವುದಿಲ್ಲವೆಂಬ ಭರವಸೆ ನನಗಿದೆ. ನನ್ನ ಪುಸ್ತಕದ ಮೇಲಿನ ಪ್ರೀತಿ ನನಗೆ ಎಂದಿನಂತೆಯೇ ಇರುತ್ತದೆ.

ಪ್ರತಿದಿನ ಬೆಳಿಗ್ಗೆ ಸಾಯಂಕಾಲ ಚಿಕ್ಕಪ್ಪನವರ ಜೊತೆಯಲ್ಲಿ ಸುತ್ತಾಡಿಕೊಂಡು ಬರುತ್ತಿದ್ದೇನೆ. ಊರಿನಲ್ಲಿ ಅವರಿಗೆ ಗುರುತಿಲ್ಲ ದವರೇ ಅಪೂರ್ವ. ಬೀದಿಯಲ್ಲಿ ಹೊರಟಾಗಲೆಲ್ಲಾ ಹತ್ತು ಗಜ ಹದಿನೈದು ಗಜಕ್ಕೊಂದುಸಲ ನಿಲ್ಲಬೇಕಾಗುತ್ತದೆ. ಇಷ್ಟು ಜನ ಇವರಿಗೆ ಹೇಗೆ ಪರಿಚಿತರೆಂದು ಚಿ|| ರಾಮುವನ್ನು ಕೇಳಿದೆ. ಬೆಳಗಿನ ಝಾವ ಹೂವು ತರಲು ಹೊರಟವರು ಯಾರುಯಾರ ಮನೆಯಲ್ಲಿ ಹೂವಿನ ಗಿಡಗಳಿವೆಯೋ ಅಲ್ಲೆಲ್ಲಾ ಹೋಗುತ್ತಾರಂತೆ. ಆ ಮನೆ ಯವರೆಲ್ಲರ ಪರಿಚಯ ಮಾಡಿಕೊಂಡು ಆ ಮನೆಗಳಿಂದ ಹೂವು ತರುತ್ತಾರಂತೆ. ಊಟಮಾಡಿ ಮೊಮ್ಮಗನನ್ನು ಎತ್ತಿಕೊಂಡು ಹೊರಗೆ ಬಂದು ಆ ಬೀದಿಯಲ್ಲಿ ಸಾಧಾರಣವಾಗಿ ಪ್ರತಿದಿನವೂ ಓಡಾಡುವವರನ್ನೆಲ್ಲಾ ಮಾತನಾಡಿಸುತ್ತಾರಂತೆ. ಹತ್ತಿರ ಯಾರ ಮನೆಯಲ್ಲಿ ಏನು ತೊಂದರೆ ಬಂದರೂ ಆ ಮನೆಯವರ ಗುರುತಿರಲಿ ಇಲ್ಲದಿರಲಿ ಇವರು ಸಿದ್ಧವಾಗಿರುತ್ತಾರಂತೆ. ಚೇಳು ಕಡಿದಿದ್ದಕ್ಕೆ ಮಂತ್ರ ಹಾಕುವುದು, ಜ್ವರ ಬಂದ ಮಕ್ಕಳಿಗೆ ವಿಭೂತಿ ಮಂತ್ರಿಸಿ ಕೊಡುವುದು, ಸಣ್ಣ ಪುಟ್ಟ ಕಾಯಿಲೆಗಳಿಗೆ ಕಷಾಯ ಮಾಡಿಸಿ ಕೊಡುವುದು ಮೊದಲಾದುವನ್ನೆಲ್ಲಾ ಮಾಡುತ್ತಾರಂತೆ. ಇಂತ ಹವರಿಗೆ ಜನಗಳ ಪರಿಚಯ ಆಗುವುದು ಹೆಚ್ಚೇ? ಅವರ ವಂಶದಲ್ಲೇ

ಹುಟ್ಟಿದ ನನಗೂ ಇಂತಹ ಗುಣಗಳನ್ನು ದೇವರು ಏಕೆ ಕರುಣಿಸಲಿಲ್ಲ ಎಂದು ಆಗಾಗ ಅನ್ನಿಸುತ್ತದೆ.

ಟಾನಸ್ಲೀಯವರು ತಮ್ಮ ವಿಶ್ವಾಸವನ್ನು ಅನೇಕ ರೀತಿಯಲ್ಲಿ ತೋರಿಸುತ್ತಿದಾರೆ. ಪ್ರತಿ ಸಾಯಂಕಾಲವೂ ಅವರ ಮನೆಗೆ ಬರ ಬೇಕೆಂದೂ ಅವರ ಮೋಟಾರಿನಲ್ಲಿ ನೋಡಬೇಕಾದ ಸ್ಥಳಗಳಿಗೆಲ್ಲಾ ಕರೆದುಕೊಂಡು ಹೋಗುವುದಾಗಿಯೂ ಹೇಳಿದರು. ನಾನು ಒಪ್ಪಲಿಲ್ಲ. ನಿನ್ನೆ ಸಾಯಂಕಾಲ ನಾನೂ ಚಿಕ್ಕಪ್ಪನೂ ಮನೆಗೆ ಹಿಂದಿರುಗುವ ಹೊತ್ತಿಗೆ ಒಂದು ದೊಡ್ಡ ಬುಟ್ಟಿ ತುಂಬ ತರಕಾರಿ ಹಣ್ಣು ವಿಳ್ಳೇ ದೆಲೆ ಇವುಗಳನ್ನು ತುಂಬಿ ' ಟಾನಸ್ಲೀ ದಂಪತಿಗಳ ವಿಶ್ವಾಸಪೂರ್ವಕ ವಾಗಿ ' ಎಂಬ ಚೀಟಿಯೊಡನೆ ಮನೆಗೆ ಕಳುಹಿಸಿದ್ದರು. ಶ್ರೀಮತಿ ಲಿಲ್ಲಿಯವರು ಈ ಪಟ್ಟಣದಲ್ಲಿ ಬಹಳ ಹೆಸರುವಾಸಿಯಾದ ವೈದ್ಯರು. ಅವರ ಆಸ್ಪತ್ರೆಯಲ್ಲಿ ಜೇನುಹುಳು ಮುತ್ತಿದಂತೆ ಜನರು ಅವರನ್ನು ಮುತ್ತಿರುತ್ತಾರೆ. ಅರಮನೆಯ ರಾಣೀವಾಸಕ್ಕೂ ಕೂಡ ಇವರೇ ವೈದ್ಯರಂತೆ. ಶಸ್ತ್ರವೈದ್ಯದಲ್ಲೂ ಆಕೆ ಬಹಳ ನಿಪುಣೆಯಂತೆ. ಮಕ್ಕಳಿಲ್ಲದ ನಿನ್ನ ತಂಗಿಯ ವಿಚಾರದಲ್ಲಿ ಅವರಿಂದ ಸಲಹೆ ಪಡೆಯ ಬೇಕೆಂದು ಚಿಕ್ಕಪ್ಪನವರು ನಿನ್ನೆ ಸೂಕ್ಷ್ಮವಾಗಿ ಪ್ರಸ್ತಾಪಿಸಿದರು. ನಾನು ನಿನಗೆ ಕಾಗದ ಬರೆದರೆ ನಿನ್ನ ತಂಗಿಯ ಅಭಿಪ್ರಾಯ ತಿಳಿದು ಬರೆಯುತ್ತೀಯೆಂದು ತಿಳಿಸಿದೆ. ನೀವು ಬರುವಹಾಗಿದ್ದರೆ ಈ ದಿನವೇ ಕಾಗದ ಬರೆಯಿರಿ. ನಿಮ್ಮ ಕಾಗದ ನೋಡಿಕೊಂಡು ನಾನು ಇಲ್ಲಿಂದ ಹೊರಡುತ್ತೇನೆ.

ಬರೆಯಬೇಕಾದದ್ದು ಇನ್ನೂ ಬೇಕಾದಷ್ಟಿದೆ. ಬರೆಯುವುದ ಕ್ಕಿಂತಲೂ ನಾನು ಅಲ್ಲಿಗೆ ಬಂದಾಗ ಇಲ್ಲವೇ ನೀವು ಇಲ್ಲಿಗೆ ಬಂದಾಗ ತಿಳಿಸುವುದು ಸುಲಭ. ನನ್ನ ಆಶೀರ್ವಾದವನ್ನು ಚಿರಂಜೀವಿಗ ಳೆಲ್ಲರಿಗೂ ತಿಳಿಸುವುದು.

ಇಂತಿ ಆಶೀರ್ವಾದಗಳು.

" ನೋಡಿದೆಯೋ, ಎಷ್ಟು ಸಣ್ಣ ಕಾಗದ ಮಹರಾಯ ಸಧ್ಯ

ಇನ್ನಷ್ಟು ಬರೆಯದೆ ಮಾತಾಡಲು ಉಳಿಸಿಕೊಂಡು ನನ್ನನ್ನು ಬದುಕಿಸಿದ. ಪುಣ್ಯಾತಿಗಿತ್ತಿ ಪಾನಕ ತಂದಳು".

ವೆಂಕಮ್ಮನವರು ಇಬ್ಬರಿಗೂ ಒಂದೊಂದು ಲೋಟ ಪಾನಕ ಕೊಟ್ಟು ತಾವೂ ಕುಡಿಯುತ್ತಾ "ಲಕ್ಷ್ಮೀ! ಕಾಗದದ ಕೊನೆಯ ಭಾಗ ನಾನೂ ಕೇಳಿದೆ. ಏನು ಹೇಳುತ್ತೀ"?

"ಬಿಡು ಅತ್ತಿಗೆ, 'ಶಿವಕೊಡದ್ದನ್ನು ಸಿದ್ದಪ್ಪ ಕೊಡುತ್ತಾನೆಯೇ?' ನಾನು ಇದಕ್ಕೋಸ್ಕರ ವಿಜಯಪುರಕ್ಕೆ ಹೋಗಬೇಕಾಗಿಲ್ಲ. ಅವರ ಕೆಲಸ ಪೂರೈಸಿದೊಡನೆಯೇ ಹೊರಟುಬರುವಂತೆ ಬರಿಯಪ್ಪ" ಎಂದು ಹೇಳಿದವರೇ ಒಳಕ್ಕೆ ಹೊರಟು ಹೋದರು.

## ೧೦

ವಿಮರ್ಶಕನ ಕೆಲಸದ ಸುಖ ವಿಮರ್ಶಕನಿಗೇ ಗೊತ್ತು. ಪರಿಶೀಲನೆಯಲ್ಲಿ ಕೆಲವಲ್ಲಿ ಗಮನಾರ್ಹವಾದ ವಿಚಾರಗಳನ್ನು ಹುಡುಕಿ ತೆಗೆಯಬೇಕಾಗುತ್ತದೆ. ಕೆಲವಲ್ಲಿ ಬೇಡದ ವಿಷಯವೇ ಸಿಕ್ಕುವುದು ಕಷ್ಟ. ಸ್ವಲ್ಪ ಅಜಾಗರೂಕತೆಯನ್ನು ತೋರಿಸಿದರೆ ಸಾವಿರಾರು ಓದುಗರ ಕೈಲಿ ಬೇಸರ ಹುಟ್ಟುವಂತಹ ಪುಸ್ತಕವನ್ನು ಇಟ್ಟ ಭಾರ; ಇಲ್ಲವೇ ವಿಕಸಿತವಾಗುತ್ತಿರುವ ಕುಸುಮವನ್ನು ಚಿಗುಟಿ ಎಸೆದ ಪಾಪ ಆತನ ಪಾಲಿಗೆ ಬರುತ್ತದೆ. ನ್ಯಾಯಾಧಿಪತಿಯ ತೀರ್ಪಿಗಿಂತಲೂ ವಿಮರ್ಶಕನ ತೀರ್ಪು ಮಹತ್ವವುಳ್ಳದ್ದು; ಕಷ್ಟತರವಾದದ್ದು. ಆತನ ಕೆಲಸವನ್ನು ಸುಲಭ ಮಾಡಲು ವಕೀಲರಿಲ್ಲ. ಕಾವ್ಯಸಂಬಂಧವಾದ ಕಾನೂನೂ ಅಷ್ಟಾಗಿ ಸಹಾಯಮಾಡುವುದಿಲ್ಲ. ಭಾಷಾ ಗೌರವವನ್ನೂ ಕಾಪಾಡಬೇಕು; ಕಾವ್ಯರಚನೆಯಲ್ಲಿ ಹೊಸ ಹೊಸ ಮಾರ್ಗಗಳಿಗೂ ಹೊಸ ಹೊಸ ಭಾವನೆಗಳಿಗೂ ಅವಕಾಶಕೊಡಬೇಕು. ಮೊಳೆಯುತ್ತಿರುವ ಹೊಸ ಕವಿಗಳಿಗೆ ಪ್ರೋತ್ಸಾಹವನ್ನುಕೊಟ್ಟು ಸಹಾಯಕ ವಾತಾವರಣವನ್ನು ಕಲ್ಪಿಸಿ ಭಾಷಾಭಿವೃದ್ಧಿಗೆ ಕಾರಣನಾಗಬೇಕು. ಇವೆಲ್ಲ ಕೆಲಸವನ್ನೂ ಸಮರ್ಪಕವಾಗಿ ನಿರ್ವಹಿಸ

ಬೇಕಾದರೆ ಪೂರ್ಣ ಪಾಂಡಿತ್ಯಬೇಕು. ಊಹಾಶಕ್ತಿಬೇಕು; ಸಹನೆಬೇಕು. ಮನಸ್ಸೋಯಿಸದೆ ಮಾರ್ಗತೋರಿಸುವಂತಹ ವಾಕ್ಯಗಳನ್ನು ಬರೆಯುವ ಅಪೂರ್ವ ಶಕ್ತಿಬೇಕು. ಈ ಎಲ್ಲ ದೃಷ್ಟಿಗಳಿಂದಲೂ ಸೋಮಶರ್ಮರಿಗಿಂತ ಉತ್ತಮ ವಿಮರ್ಶಕರು ದೊರೆಯುವುದು ಅಪೂರ್ವ.

ಶಿವರಾಮಯ್ಯನವರ ಹೆಸರನ್ನು ವಿದ್ವಾಂಸವೃಂದದಲ್ಲಿ ಕೇಳಿದವರೇ ಇಲ್ಲ. ಜೊತೆಗೆ ಅವರ ಪ್ರಥಮ ಗ್ರಂಥ. ಟಾನಸ್ಲೇಯವರ ಮೂಲಕ ಪ್ರಾರ್ಥನೆ ಬರದೇ ಇದ್ದಿದ್ದರೆ ಶರ್ಮರು ಪುಸ್ತಕ ವಿಮರ್ಶೆಯನ್ನು ಮಾಡಲು ಸ್ವಪ್ರಯತ್ನ ಒಪ್ಪುತ್ತಿರಲಿಲ್ಲ. ಒಪ್ಪಿಕೊಂಡ ಕೆಲಸವನ್ನು ತಮ್ಮ ಮನಸ್ಸಿಗೆ ತೃಪ್ತಿಕರವಾಗಿ ಮಾಡಲು ಪದ್ಧತಿಯನ್ನನುಸರಿಸಿ ಒಂದುಸಲ ಪುಸ್ತಕವನ್ನು ವಿಹಂಗಮ ದೃಷ್ಟಿಯಿಂದ ಅವಲೋಕಿಸಿದರು. ಗ್ರಂಥ ಮನಸ್ಸಿನಮೇಲೆ ತನ್ನ ಪ್ರಭಾವವನ್ನು ಬೀರಿತು. ಪುನರಾವರ್ತನೆ ಮಾಡಿ ವಿಶದವಾದ ವಿಮರ್ಶೆಗೆ ಪ್ರಾರಂಭಿಸುವಾಗ ನೂತನ ಕವಿಯ ಪ್ರಥಮಗ್ರಂಥವೆಂಬ ಅಭಿಪ್ರಾಯ ಹೋಗಿ ನುರಿತ ಕವಿಯ ಪಕ್ವಹೃದಯದ ಆಣಿಮುತ್ತೆಂಬ ಭಾವನೆ ಮನಸ್ಸನ್ನಾವರಿಸಿತು. ಪುಟಗಳನ್ನು ತಿರುವಿಹಾಕುತ್ತ ಬಂದಂತೆಲ್ಲಾ ಅದೇ ವಿಷಯದಲ್ಲಿ ತಾವೇ ಗ್ರಂಥರಚನೆಯನ್ನು ಮಾಡಿದ್ದರೂ ಅದಕ್ಕಿಂತ ಉತ್ತಮವಾಗಿ ಬರೆಯಲು ಅಸಾಧ್ಯವೆಂಬ ಭಾವನೆ ಶರ್ಮರಲ್ಲಿ ಉಂಟಾಗಿ ವಿಮರ್ಶೆಯಕೆಲಸ ತಮ್ಮ ಪಾಲಿಗೆ ಬಂದುದು ಅಪೂರ್ವ ಅವಕಾಶವೆಂದು ಪರಿಗಣಿಸಲು ಪ್ರಾರಂಭಿಸಿದರು.

ಪಡೆದಿದ್ದ ಗಡುವಿನ ಕೊನೆಯದಿವಸ ವಿಮರ್ಶೆಯೂ ಮುಗಿದಿದ್ದಿತು. ಆ ದಿನ ವಿಮರ್ಶೆಯನ್ನು ಪುನರಾವಲೋಕಿಸಿ ಗ್ರಂಥಕ್ಕೆ ಯೋಗ್ಯವಾದ ಭಾಷೆ ಮತ್ತು ಶೈಲಿಯಲ್ಲಿ ಅದನ್ನು ಬರೆಯುವ ಕೆಲಸದಲ್ಲಿ ನಿರತರಾಗಿದ್ದರು. ಆಗ ಹೊರಗೆ ಬಾಗಿಲಲ್ಲಿ ಯಾರೋ " ಬುದ್ಧೀ, ಬುದ್ಧೀ " ಎಂದು ಕೂಗುತ್ತಾ ಬಾಗಿಲನ್ನು ತಟ್ಟಿದರು. ಕೆಲವು ನಿಮಿಷಗಳಲ್ಲಿ ರಂಗನು ಕಿರುಮನೆಯ ಬಾಗಿಲನ್ನು ತೆಗೆದುಕೊಂಡು ಬಂದು " ಅರಮನೆಯ ಕಛೇರಿಯ ಜವಾನ ಕಾಗದ ತಂದಿದಾನೆ " ಎಂದು ಹೇಳಿ ಒಂದು ಲಕ್ಕೋಟೆಯನ್ನೂ ಒಂದು ಪುಸ್ತಕವನ್ನೂ ಮುಂದಿಟ್ಟನು. ಪುಸ್ತಕದಲ್ಲಿ ಸಹಿಮಾಡಿ ಲಕ್ಕೋಟೆಯನ್ನು

ಒಡೆದು ಕಾಗದವನ್ನು ಓದಿದರು. ಮುಖದಲ್ಲಿ ಕೋಪವೂ ಆಶ್ಚರ್ಯವೂ ಮೂಡಿದುವು. "ರಂಗಾ, ರಂಗಾ" ಎಂದು ಸ್ವಲ್ಪ ಗಡಸು ಧ್ವನಿಯಲ್ಲಿ ಪುಸ್ತಕವನ್ನು ಹಿಂಗಕ್ಕೆ ಕೊಡಲು ಹೋಗಿದ್ದ ಆಳನ್ನು ಕೂಗಿದರು. ಪುಸ್ತಕಸಮೇತ ಓಡೋಡುತ್ತ ಬಂದು ನಿಲ್ಲುತ್ತಲೆ "ಎಲ್ಲಿ ಪತ್ರಗಳನ್ನು ಸಿಕ್ಕಿಸಿರುವ ತಂತಿಯನ್ನು ತೆಗೆದುಕೊಂಡು ಬಾ" ಎಂದರು.

ಬಂದ ಕಾಗದಗಳನ್ನೆಲ್ಲ ಓದಿದಮೇಲೆ ಒಂದು ತಂತಿಗೆ ಅವುಗಳನ್ನು ಸಿಕ್ಕಿಸುವುದು ಶರ್ಮರ ಪದ್ಧತಿ. ರಂಗನು ಆ ತಂತಿಯನ್ನು ತಂದು ಮುಂದಿಟ್ಟನು. ಕಾಗದಗಳನ್ನು ಒಂದೊಂದಾಗಿ ತೆಗೆಯುತ್ತ ಬಂದರು. ಸರಿಯಾಗಿ ಹದಿನೈದು ದಿನಗಳ ಕಾಗದಗಳನ್ನು ತೆಗೆದಮೇಲೆ ಅರಮನೆಯ ಕಾಗದ ಒಂದು ಸಿಕ್ಕಿತು. ಅದನ್ನು ನೋಡುತ್ತಲೇ ಮುಖ ವಿವರ್ಣ ವಾಯಿತು. ಹೊರಗೆ ತೆಗೆದು ಓದಿದರು. ಖಾಸ್ ಭಕ್ಷಿಯವರು ಬರೆದಿರು ವಂತೆ ಮಹಾರಾಜರು ಏರ್ಪಡಿಸಿರುವ ಗ್ರಂಥಸ್ಪರ್ಧೆಗೆ ಗ್ರಂಥವನ್ನು ಕಳುಹಿಸ ಬೇಕೆಂಬ ಅಭಿಪ್ರಾಯ ಅದರಲ್ಲಿ ಸೂಚಿತವಾಗಿದೆ. ಇಂತಹ ಮಹತ್ವದ ಕಾಗದ ತಮ್ಮ ದೃಷ್ಟಿಗೆ ಬೀಳದೆ ತಂತಿಗೆ ಹೇಗೆ ಹೋಯಿತೆಂಬುದನ್ನು ತಿಳಿಯಲಾರದಾದರು. ರಂಗನಕಡೆ ತಿರುಗಿ ಕೋಪದಿಂದ "ರಂಗಾ ಅರ ಮನೆಯಿಂದ ಬಂದ ಈ ಕಾಗದ ನನಗೆ ತೋರಿಸದೆ ತಂತಿಗೆ ಏಕೆ ಸಿಕ್ಕಿಸಿದೆ?" ಎಂದರು.

"ಕಾಗದ ಯಾವಾಗ ಬಂದಿದೆ ಬುದ್ಧಿ?"

"ಹದಿನೈದು ದಿನಗಳ ಕೆಳಗೆ".

"ಆಗ ನಾನು ರಜ ಹೋಗಿದ್ದೆ".

"ನಿಜ, ಎಲ್ಲಿ ಪುಸ್ತಕ ತಾ ಕಾಗದ ತೆಗೆದುಕೊಂಡದ್ದಕ್ಕೆ ಯಾರು ರುಜು ಮಾಡಿದ್ದಾರೆ ನೋಡೋಣ" ಎಂದು ಹೇಳಿ ಪುಸ್ತಕವನ್ನು ತೆಗೆದು ಕೊಂಡು ನೋಡಿ "ಬದಲಿ ಆಳು, ಏಕೆ ಹೀಗೆ ಮಾಡಿದ. ನೀನು ಹೋಗು ವಾಗ ಅವನಿಗೆ ಸರಿಯಾಗಿ ಹೇಳಿರಲಿಲ್ಲವೇ"?

“ಎಲ್ಲಾ ಹೇಳಿದ್ದೆ ನನ್ನೊಡೆಯಾ, ಅವನು ಇಲ್ಲೇ ಕಚೇರೀಲಿ ಕೆಲ್ಸದಲ್ಲಿದ್ದಾನೆ ಇಚಾರಿಸ್ಲಾ”?

“ಏನು ಪ್ರಯೋಜನ, ಕೆರೆ ಒಡೆದವನ ಕಂಬಳೀ ಕಿತ್ತುಕೊಂಡ ಹಾಗೆ. ಜವಾನ ಹೊರಟುಹೋದನೋ ಇದ್ದಾನೋ”?

“ಈ ಪುಸ್ತಕಕ್ಕಾಗಿ ಕಾದಿದಾನೆ”.

“ನಾಳೆ ಜವಾಬು ಕಳುಹಿಸುತ್ತಾರೆಂದು ಭಕ್ಷಿಯವರಿಗೆ ನನ್ನ ವಂದನೆ ಗಳೊಡನೆ ತಿಳಿಸಬೇಕು. ಒಳಗೆ ಹೋಗಿ ಅಡಕೆಲೆ, ತಿಂಡಿ ಏನಾದರೂ ಇದ್ದರೆ ಕೊಟ್ಟು ಕಳುಹಿಸು”.

ಶರ್ಮರು ಯೋಚನೆ ಮಾಡುತ್ತ ಕುಳಿತರು. ಐದುಜನ ವಿದ್ವಾಂಸರಲ್ಲಿ ಸ್ಪರ್ಧೆ. ಮಹಾರಾಜರ ಆದರ ವಿಶ್ವಾಸಗಳಿಗೆ ಪಾತ್ರರಾದ ತನ್ನೊಬ್ಬರಿಂದ ಮಾತ್ರ ಗ್ರಂಥ ಇನ್ನೂ ಬಂದಿಲ್ಲ. ಇರುವ ಕಾಲಾವಕಾಶ ಒಂದು ದಿನ. ಗ್ರಂಥವನ್ನು ರಚಿಸಲು ಮಾನವ ಶಕ್ತಿಗೆ ಅಳವಲ್ಲ. ಕಬೀರನಿಗೆ ವಸ್ತ್ರವನ್ನು ನೆಯ್ದುಕೊಟ್ಟ ಪಂಡರಿನಾಥನು ಬಂದು ಬರೆದರೆ ಮಾತ್ರ ಸಾಧ್ಯ. ಸ್ಪರ್ಧೆ ಯಲ್ಲಿ ತಮ್ಮ ಗ್ರಂಥವಿಲ್ಲದಿದ್ದರೆ ಮಹಾರಾಜರು ಏನೆಂದುಕೊಳ್ಳುವರು. ನನ್ನ ಮಾತಿನಲ್ಲಿ ಈತನಿಗೆ ಗೌರವವಿಲ್ಲವೆಂದುಕೊಳ್ಳುವರೋ, ಸಂಸ್ಕೃತದಲ್ಲಿ ಇರುವಷ್ಟು ಪಾಂಡಿತ್ಯ ಕನ್ನಡದಲ್ಲಿಲ್ಲದೆ ಹಿಂದೆಗೆದನೆಂದುಕೊಳ್ಳುವರೋ? ಉಳಿದ ವಿದ್ವಾಂಸರು ಏನೆಂದು ಟೀಕಿಸುವರು. ಈತನ ಪ್ರತಿಷ್ಠೆ ಎಷ್ಟು? ಮಹಾರಾಜರ ಮಾತನ್ನೂ ಮೀರಿದ್ದಾನೆ. ಎಂದು ಹೇಳುವರೋ? ನಾನು ಕಾಗದವನ್ನು ನೋಡಿರಲಿಲ್ಲವೆಂದು ಹೇಳಿದರೆ ಯಾರೂ ನಂಬುವುದಿಲ್ಲ. ಭಗವಂತನೇ ನನ್ನ ಮಾನವನ್ನು ರಕ್ಷಿಸಬೇಕು. ಎಂದುಕೊಳ್ಳುತ್ತಾ ಎಡ ಗೈಯ್ಯಮೇಲಿಟ್ಟಿದ್ದ ಗಲ್ಲವನ್ನು ಮೇಲಕ್ಕೆತ್ತಿದರು.

ಇಳಿಜಾರು ಮೇಜಿನಮೇಲಿದ್ದ ಶಿವರಾಮಯ್ಯನವರ ಗ್ರಂಥವು ಕಣ್ಣಿಗೆ ಬಿದ್ದಿತು. ಕಗ್ಗತ್ತಲೆಯನ್ನುಂಟುಮಾಡುತ್ತಿದ್ದ ಕಾರ್ಮೋಡಗಳಮೇಲೆ ಒಂದು ಮಿಂಚು ಸುಳಿದಂತಾಯಿತು. ಒಂದು ಹೊಸ ಆಲೋಚನೆಯು

ಮನಸ್ಸಿಗೆ ಬಂದಿತು. ಇದೇ ಗ್ರಂಥವನ್ನು ತಾವು ಏಕೆ ಕಳುಹಿಸಬಾರದು? ಗ್ರಂಥಕ್ಕೆ ಬಹುಮಾನವನ್ನು ಪಡೆಯುವಷ್ಟು ಯೋಗ್ಯತೆ ಇದೆಯೋ ಇಲ್ಲವೋ ಹೇಳುವುದು ಕಷ್ಟ. ಆದರೂ ಯಾವ ಮೇಲಂತಸ್ತಿನ ಕವಿಯೂ ತನ್ನ ಕೃತಿಯೆಂದು ಹೇಳಿಕೊಳ್ಳಲು ಹಿಂಜರಿಯದಂತಹುದು. ಮಹಾರಾಜರ ಆಜ್ಞೆಯನ್ನು ಮನ್ನಿಸಿದಂತಾಗುತ್ತದೆ. ಪ್ರತಿಯು ಹಿಂದಕ್ಕೆ ಬಂದಮೇಲೆ ಟಾನಸ್ಲೇಯವರಿಗೆ ಕೊಡಬಹುದು. ಒಂದುವೇಳೆ ಬಹುಮಾನ ಬಂದರೆ ಅದರ ಬೆಲೆಗೆ ಇನ್ನಷ್ಟು ಸೇರಿಸಿ ಶಿವರಾಮಯ್ಯನವರಿಗೆ ಕೊಡಬಹುದು. ಅದರಿಂದ ಆ ಬಡಬ್ರಾಹ್ಮಣರಿಗೆ ಸ್ವಲ್ಪ ಸಹಾಯವಾಗುವುದು. ಗ್ರಂಥ ಪ್ರಕಟಣೆಯನ್ನು ಸ್ವಲ್ಪ ಸಾವಕಾಶ ಮಾಡಬೇಕಾಗುತ್ತದೆ. ಅದು ನನ್ನ ದೆಸೆಯಿಂದಾಗುತ್ತಾದ್ದರಿಂದ ಬಹುಮಾನ ಬರಲಿ ಬಾರದಿರಲಿ ಶಿವರಾಮಯ್ಯನವರು ಪ್ರಕಟಣೆಯಿಂದ ನಿರೀಕ್ಷಿಸುತ್ತಿರುವ ಪ್ರತಿಫಲಕ್ಕೂ ಸ್ವಲ್ಪ ಹೆಚ್ಚಾಗಿ ನಾನು ಅವರಿಗೆ ಕೊಟ್ಟರೆ ಅವರಿಗೆ ಸಂತೋಷವಾಗಬಹುದು. ಟಾನಸ್ಲೇಯವರ ಪ್ರಕಟನಾಲಯಕ್ಕೆ ನನ್ನ ಮಿತ್ರರಿಂದ ಸ್ಪರ್ಧೆಗೆ ಬಂದಿರುವ ಯಾವುದಾದರೊಂದು ಕೃತಿಯನ್ನು ಕೊಟ್ಟರಾಯಿತು. ಯಾರಿಗೂ ಅನ್ಯಾಯ ಮಾಡಿದಂತಾಗುವುದಿಲ್ಲ.

ಟಾನಸ್ಲೇಯವರಾಗಲಿ ಶಿವರಾಮಯ್ಯನವರಾಗಲಿ ನಾಳೆ ಬಂದರೆ ಏನು ಹೇಳುವುದು. ನಾನು ಮಾಡಿರುವ ಕೆಲಸವನ್ನು ಹೇಳಲೇ? ನಿಜ ಸ್ಥಿತಿ ಅವರಲ್ಲೇ ಇದ್ದರೆ ಸರಿ. ನನ್ನ ದುರದೃಷ್ಟದಿಂದ ಆಸ್ಥಾನವಿದ್ವಾಂಸರ, ಮಹಾರಾಜರ ಕಿವಿಗೆ ಬಿದ್ದರೆ ಆಗುವ ನನ್ನ ಸ್ಥಿತಿಯನ್ನು ಊಹಿಸಿದರೆ ಈಗಲೇ ಮೈ ಬೆವರುತ್ತದೆ. ಏನುಮಾಡಲಿ. ಹೇಗಿದ್ದರೂ ಗ್ರಂಥದ ಬೇರೆ ಪ್ರತಿಯಿಲ್ಲವೆಂದು ಶಿವರಾಮಯ್ಯನವರು ಹೇಳಿದ್ದಾರೆ. ನಿಮ್ಮ ಗ್ರಂಥ ಕಳೆದುಹೋಯಿತು. ಅದರ ನಷ್ಟವನ್ನು ಕಟ್ಟಿಕೊಡುತ್ತೇನೆಂದು ಹೇಳಲೇ? ದುಡ್ಡಿಗಾಗಿ ಪುಸ್ತಕ ಬರೆದಿದ್ದರೆ ಒಪ್ಪುತ್ತಾರೆ. ಇಲ್ಲದಿದ್ದರೆ ನಾಲ್ಕು ಜನರಲ್ಲಿ ಹೋಗಿ ಪಂಚಾಯತಿಗೆ ಪ್ರಾರಂಭಿಸಿದರೆ ಏನು ಮಾಡುವುದು? ಗ್ರಂಥಾವಲೋಕನವೇನೋ ಮುಗಿಯಿತು. ವಿಮರ್ಶೆಯನ್ನು ಬರೆಯುತ್ತಾ ಇದ್ದೇನೆ. ಅನಿರೀಕ್ಷಿತ ಕೆಲಸ ಒದಗಿದ್ದರಿಂದ ಸದ್ಯಕ್ಕೆ ಅದನ್ನು ನಿಲ್ಲಿಸಬೇಕಾಗಿದೆ.

ಇನ್ನೊಂದು ವಾರದ ಮೇಲೆ ಬರೆದು ಕೊಡುತ್ತೇನೆ. ಎಂದು ಹೇಳಿದರೆ ಒಂದುವಾರ ಅವಕಾಶ ಸಿಕ್ಕುತ್ತದೆ. ಶಿವರಾಮಯ್ಯನವರ ಸ್ವಭಾವವನ್ನು ಸ್ವಲ್ಪ ನೋಡಿ ಮುಂದಲ ಯೋಚನೆ ಮಾಡಬಹುದು. ಅರಮನೆಯಿಂದ ಗ್ರಂಥವೇ ಅಷ್ಟುಹೊತ್ತಿಗೆ ಹಿಂತಿರುಗಿ ಬರಬಹುದು. ದೇವರಮೇಲೆ ಭಾರ ಹಾಕಿ ಈ ಗ್ರಂಥವನ್ನೇ ಕಳುಹಿಸುತ್ತೇನೆ. ಎಂದು ತೀರ್ಮಾನಿಸಿ ಪುಸ್ತಕದ ಜೊತೆಯಲ್ಲಿ ಕಳುಹಿಸುವ ಕಾಗದವನ್ನು ಹೇಗೆ ಬರೆಯಬೇಕೆಂದು ಬಹಳ ಯೋಚಿಸಿ ಕೊನೆಗೆ ಹೀಗೆ ಬರೆದರು.

ಶ್ರೀ ವಿಜಯಪುರ
ಪುಷ್ಯ ಶುದ್ಧ ಬಿದಿಗೆ

ಅಶೇಷ ಗುಣಗುಣಾಲಂಕೃತ ಮಾನ್ಯವರ ಮಿತ್ರ ಮಹಾಶಯ ಶ್ರೀ ಶಿವರುದ್ರಪ್ಪನವರಲ್ಲಿ ಸೋಮಶರ್ಮರ ವಿಜ್ಞಾಪನೆಗಳು—

ವಿಶ್ವಾಸಪೂರ್ವಕವಾಗಿ ಪತ್ರ ಬರೆಸಿದ್ದಕ್ಕೆ ಬಹಳ ಕೃತಜ್ಞನಾಗಿದ್ದೇನೆ. ಕಾರಣಾಂತರದಿಂದ ಗ್ರಂಥವನ್ನು ಕಳುಹಿಸುವುದು ಸಾವಕಾಶವಾಯಿತು. ಸಕಾಲದಲ್ಲಿ ಜ್ಞಾಪಕ ಕೊಟ್ಟದ್ದಕ್ಕೆ ಚಿರ ರುಣಿಯಾಗಿರುವೆನು.

ಈ ಕೂಡ ಒಂದು ಗ್ರಂಥವನ್ನು ಅದು ಮಹಾಸ್ವಾಮಿಯವರ ಅವಗಾಹನೆಗೆ ಯೋಗ್ಯವಾದದ್ದೆಂಬ ಭಾವನೆಯಿಂದ ಕಳುಹಿಸಿದ್ದೇನೆ. ದಯವಿಟ್ಟು ಅದನ್ನು ಪ್ರಭುಗಳಿಗೆ ನನ್ನ ರಾಜಭಕ್ತಿಯೊಡನೆ ಸಮರ್ಪಿಸಬೇಕಾಗಿ ಬೇಡುತ್ತೇನೆ. ತಾವು ನನ್ನಮೇಲೆ ತೋರಿಸುತ್ತಿರುವ ವಿಶ್ವಾಸಕ್ಕೆ ನನ್ನನ್ನು ಅರ್ಹನನ್ನಾಗಿ ಮಾಡುವಂತೆಯೂ ತಮಗೆ ದೀರ್ಘಾಯಸ್ಸನ್ನು ಕರುಣಿಸುವಂತೆಯೂ ಭಗವಂತನನ್ನು ಪ್ರಾರ್ಥಿಸುವ.

ತಮ್ಮ ವಿಶ್ವಾಸಿ
ಸೋಮಶರ್ಮ.

ಪತ್ರವನ್ನು ಬರೆದಮೇಲೆ ಎರಡು ಸಾರಿ; ಮೂರು ಸಾರಿ ಓದಿದರು. ಬಹಳ ಆಲೋಚಿಸಿದರು. ಮನಸ್ಸಿಗೆ ಸಮರ್ಪಕವಾಗಿಕಂಡಿತು. ' ಭಗವಂತ !

ಇಗು ನಿನ್ನ ಪ್ರೇರಣೆಯಂತೆ ನಾನು ಮಾಡುತ್ತಿರುವ ಕೆಲಸ' ಎಂದುಕೊಳ್ಳುತ್ತ ಕಾಗದವನ್ನು ಲಕ್ಕೋಟಿಯುಳ್ಳಿಟ್ಟು ದರಬಾರು ಭಕ್ತರಿಗಳ ವಿಳಾಸ ಬರೆದು ಗ್ರಂಥವನ್ನೂ ಕಾಗದವನ್ನೂ ಮಾರನೆಯ ದಿವಸ ಕಳುಹಿಸಲು ನಿಶ್ಚಯಿಸಿದರು.

## ೧೧

ಕ್ರೈಸ್ತಧರ್ಮ ಪ್ರಸಾರಕರು ತಮ್ಮ ಮತಾನುಯಾಯಿಗಳು ಸನ್ಮಾರ್ಗದಲ್ಲಿರಲು ಸಹಾಯಮಾಡಲು ಮತ ತತ್ವಗಳು ಎಲ್ಲರಿಗೂ ತಿಳಿಯುವಂತೆ ಮಾಡಲು ಹಲವು ಮಾರ್ಗಗಳನ್ನು ಅವಲಂಬಿಸಿದ್ದಾರೆ. ಮತದ ಮುಖ್ಯ ಗ್ರಂಥವು ಪ್ರತಿಷ್ಠಾಪನಾಚಾರ್ಯನಿಂದ ಬರೆಯಲ್ಪಟ್ಟ ಭಾಷೆಯಲ್ಲಿ ಮಾತ್ರ ಇರಬೇಕೆಂಬ ಕಠಿಣ ನಿಯಮವನ್ನು ಅನುಸರಿಸದೆ ಬೇರೆ ಬೇರೆ ದೇಶದ ಬೇರೆ ಬೇರೆ ಪ್ರಾಂತದ, ಬೇರೆ ಬೇರೆ ಮಾತೃಭಾಷೆಗಳ ಅನುಯಾಯಿಗಳೆಲ್ಲರಿಗೂ ಸುಲಭ ಗ್ರಾಹ್ಯವಾಗುವಂತೆ ಅವರವರ ಮಾತೃಭಾಷೆಗಳಲ್ಲಿ ಮತಗ್ರಂಥಗಳನ್ನು ಪ್ರಚುರ ಪಡಿಸುವುದು, ಸಾಕಷ್ಟುಮಟ್ಟಿಗೆ ಕ್ರೈಸ್ತರು ಇರುವ ಸ್ಥಳಗಳಲ್ಲಿ ದೇವಾಲಯಗಳನ್ನು ಕಟ್ಟಿ ಅಲ್ಲಿ ಪ್ರತಿವಾರವೂ 'ಸತ್ಯವೇದ'ದಿಂದ ವಾಕ್ಯಗಳನ್ನು ಆಯ್ದು ತೆಗೆದು ಅವುಗಳ ಅರ್ಥವನ್ನು ವಿವರಿಸಿ ದಿನದಿನದ ಜೀವನದಲ್ಲಿ ಅವುಗಳನ್ನು ಹೇಗೆ ಅನ್ವಯಿಸಿಕೊಂಡು ಈ ಕ್ಲಿಷ್ಟವಾದ ಸಂಸಾರಪಥದಲ್ಲಿ ದೃಷ್ಟಿಯನ್ನು ಭಗವಂತನಮೇಲೆ ಯಾವ ರೀತಿ ಕೇಂದ್ರೀಕರಿಸಬಹುದೆಂಬುದನ್ನು ತಿಳಿಸುವುದೂ, ಇನ್ನೂ ಎಳೆಯ ವಯಸ್ಸಿನಲ್ಲಿ ಮಕ್ಕಳ ಮನಸ್ಸಿಗೆ ಹಿಡಿದ ಅಭಿಪ್ರಾಯಗಳು ಎಂದೆಂದಿಗೂ ಸ್ಥಿರವಾಗಿರುತ್ತೆಂಬ ತತ್ವಶಾಸ್ತ್ರದ ಬೋಧನೆಯ ಆಧಾರದಮೇಲೆ ಈ ಕುರಿತ ದಿನಗಳಲ್ಲಿ ಚಿಕ್ಕಮಕ್ಕಳಿಗಾಗಿಯೇ ಬೇರೆ ಕೂಟಗಳನ್ನು ಏರ್ಪಡಿಸಿ ಸತ್ಯವೇದದಿಂದ ಅಂದವಾದ ಕಥೆಗಳನ್ನು ಆಯ್ದು ಚಿತ್ತಾಕರ್ಷಣೀಯವಾದ ಚಿತ್ರಗಳ ಮೂಲಕ ಕಥೆಗಳು ಮಕ್ಕಳ ಮನಸ್ಸಿಗೆ ನಾಟುವಂತೆ ಬೋಧಿಸುವುದೂ ಇವರು ಅವಲಂಬಿಸಿರುವ ಕೆಲವು ಮಾರ್ಗಗಳು. ಇಂತಹ ಮಾರ್ಗಗಳನ್ನು ಸನಾತನ ಧರ್ಮವನ್ನು ಕಾಪಾಡುವ, ಪ್ರಸಾರಮಾಡುವ

ಮಠಾಧಿಪತಿಗಳೂ, ಸನಾತನಿಗಳ ಮಕ್ಕಳಿಗಾಗಿ ಇಟ್ಟಿರುವ ಪಾಠಶಾಲೆಗಳೂ ಅನುಸರಿಸಿದರೆ ಸನಾತನ ಧರ್ಮಗಳೆಂದು ಬಾಯಿಯಲ್ಲಿ ಹೇಳಿಕೊಳ್ಳುತ್ತಾ ಸನಾತನ ಧರ್ಮವೇನೆಂಬುದನ್ನೇ ಅರಿಯದ ಅನೇಕರಿಗೆ ಜ್ಞಾನಮಾರ್ಗವನ್ನು ತೋರಿಸಿಕೊಟ್ಟಂತಾಗುವುದಲ್ಲದೆ ಸನಾತನಧರ್ಮಕ್ಕೆ ಜೀವಕಳೆ ತುಂಬಿ ದಂತಾಗುತ್ತದೆ.

ಟಾನಸ್ಲೇಯವರ ನೇತೃತ್ವದಲ್ಲಿ ನಡೆಸಲ್ಪಡುತ್ತಿದ್ದ ದೇವಾಲಯದಲ್ಲೂ ವಾರಕ್ಕೆ ಎರಡುಸಲ ಆದಿತ್ಯವಾರ ಬೃಹಸ್ಪತಿವಾರಗಳಲ್ಲಿ ಇಂತಹ ಕೂಟ ಗಳು ನಡೆಯುತ್ತಿದ್ದುವು. ಉಪದೇಶವು ಸಾಧಾರಣವಾಗಿ ಕನ್ನಡದಲ್ಲಿಯೇ ನಡೆಯುತ್ತಿದ್ದಿತು. ಸುತ್ತುಮುತ್ತಲಗ್ರಾಮಗಳ ಕ್ರೈಸ್ತರೂ ಊರಿನವರೂ ತಪ್ಪದೆ ಕೂಟಗಳಿಗೆ ಬಂದು ಉಪದೇಶದ ಪ್ರಯೋಜನವನ್ನು ಹೊಂದು ತ್ತಿದ್ದರು. ಮಕ್ಕಳ ಬೋಧನೆಯ ಕೆಲಸ ಜಾನಯ್ಯನವರ ಪಾಲಿಗೆ ಮೀಸಲಾಗಿತ್ತು. ದೇವಾಲಯದಲ್ಲಿ ಬೋಧಿಸುವ ಜವಾಬ್ದಾರಿ ಒಂದೊಂದುಸಲ ಟಾನಸ್ಲೇಯವರಿಗೂ ಒಂದೊಂದುಸಲ ಅದಕ್ಕಾಗಿಯೇ ನಿಯಮಿತರಾಗಿದ್ದ ಪಾಲಕರಿಗೂ ಬರುತ್ತಿತ್ತು.

ಶರ್ಮರಿಂದ ಪುಸ್ತಕವನ್ನು ಹಿಂದಕ್ಕೆ ತರಲು ನಿಶ್ಚಯವಾಗಿದ್ದ ಗುರುವಾರ. ಟಾನಸ್ಲೇಯವರು ದೇವಾಲಯದಲ್ಲಿ ತಮ್ಮ ಪವಿತ್ರ ಕಾರ್ಯ ವನ್ನು ಮುಗಿಸಿ ಮನೆಗೆಬರುವ ವೇಳೆಗೆ ಸಂಜೆ ಐದುಗಂಟೆ ಸಮಯವಾಗಿತ್ತು. ಮನೆಗೆ ಬಂದವರೇ, ಮೇಜಿನ ಮೇಲಿದ್ದ ಕೈಗಂಟೆಯನ್ನು ಶಬ್ದಮಾಡಿದರು. ಮೆಥೂಸಲನು ಒಳಕ್ಕೆ ಬಂದು ನಮ್ರತೆಯಿಂದ "ಏನ್ರಯ್ಯ" ಎಂದನು.

"ಜಾನಯ್ಯನವರನ್ನು ದಯವಿಟ್ಟು ಬರುವಂತೆ ಹೇಳು".

ಜಾನಯ್ಯನವರು ಒಳಗೆ ಬಂದವರೇ "ನಮಸ್ಕಾರ್ರಯ್ಯ, ಮೆಥೂಸಲ ನಿಮ್ಮ ಆಜ್ಞೆ ಆಯಿತೆಂದು ಹೇಳಿದ" ಎಂದರು.

"ನಮಸ್ಕಾರ ಜಾನಯ್ಯ, ಕುಳಿತುಕೊಳ್ಳಿರಿ. ಈದಿನ ಸೋಮ ಶರ್ಮರು ಅವರ ಅಭಿಪ್ರಾಯಕ್ಕಾಗಿ ಕೊಟ್ಟಿರುವ ಪುಸ್ತಕ ಹಿಂದಕ್ಕೆ

ಕೊಡುತ್ತಾರಲ್ಲವೆ? ಅವರಿಗೆ ಪ್ರತಿಫಲ ಏನು ಕೊಡಬೇಕು?"

"ನಾವು ಕೊಡುವುದು ಬಹಳ ಕಡಿಮೆ ಎಂದರೆ ಐವತ್ತು ರೂಪಾಯಿಗಳು; ಹೆಚ್ಚೆಂದರೆ ನೂರು ರೂಪಾಯಿಗಳು".

"ಶರ್ಮರು ನಮಗಾಗಿ ಬೇಗ ಕೆಲಸಮಾಡುತ್ತಿದ್ದಾರೆ. ಅವರ ಘನತೆ ಹೆಚ್ಚು. ಆದುದರಿಂದ ನೂರು ರೂಪಾಯಿಗಳನ್ನು ಕೊಡುವುದು ಸರಿಯೆಂದು ನನ್ನ ಅಭಿಪ್ರಾಯ. ನಿಮ್ಮ ಅಭಿಪ್ರಾಯವೇನು"?

"ತಾವು ಯೋಚಿಸಿರುವುದು ಸರಿಯೆಂದೇ ನನ್ನ ಅಭಿಪ್ರಾಯ. ಅವರಿಂದ ಗ್ರಂಥ ಉತ್ತಮವಾಗುದೆಂದು ಅಭಿಪ್ರಾಯ ಬಂದು; ನಾವು ಪುಸ್ತಕವನ್ನು ಪ್ರಕಟಿಸಿದರೆ ಬೆಲೆ ಸ್ವಲ್ಪ ಹೆಚ್ಚಾಗಿದ್ದರೂ ಪ್ರತಿಗಳಿಗೆ ಗಿರಾಕಿ ಇರುತ್ತದೆ".

ಟಾನಸ್ಲೇಯವರು ಮುಗುಳ್ನಗೆ ನಗುತ್ತಾ "ನಿಮಗೆ ಯಾವಾಗಲೂ ನಿಮ್ಮ ಒಂದು ಮೊಹರನ್ನು ಪತ್ತು ಮೊಹರನ್ನಾಗಿ ಮಾಡುವ ಯೋಚನೆಯೇ? ದಯವಿಟ್ಟು ಅವರಿಗೆ ಕೊಡಬೇಕಾದ ಹಣ, ಅವರಿಂದ ನಮಗೆ ಬರಬೇಕಾದ ರಸೀತಿ, ಎಲ್ಲಾ ಸಿದ್ಧಮಾಡಿರಿ. ನಿಮಗೂ ಪುರಸತ್ತು ಇದ್ದರೆ ಇಬ್ಬರೂ ಹೋಗಿ ಪುಸ್ತಕ ತರೋಣ".

"ಈಗ ಐದುಗಂಟೆ. ಆರುಗಂಟೆಯ ಹೊತ್ತಿಗಾದರೆ ಬರುತ್ತೇನೆ. ಈಗ ನಾನು ಮಕ್ಕಳಿಗೆ ಬೋಧನೆ ಮಾಡಬೇಕಾಗಿದೆ".

"ಹೌದು ಮರೆತಿದ್ದೆ. ಹಾಗೇ ಆಗಲಿ. ನಾನು ನಿಮಗಾಗಿ ಕಾದಿರುತ್ತೇನೆ".

"ಈಗ ತಮಗೆ ಬೇರೆ ಕೆಲಸವಿಲ್ಲದಿದ್ದರೆ ಸ್ವಲ್ಪ ತೊಂದರೆ ಕೊಡಲೇ? ತರಗತಿಯನ್ನು ನೋಡಲು ಯಾವಾಗಲೂ ಲಿಲ್ಲಿಯಮ್ಮನವರು ಬರುತ್ತಿದ್ದರು. ಈಗ ಸ್ವಲ್ಪ ಹೊತ್ತಿನಲ್ಲಿ ಅವರಿಗೆ ಅರಮನೆಯಿಂದ ಕೂಡಲೇ ಬರಬೇಕೆಂದು ವರ್ತಮಾನ ಬಂತು. ಅವರು ಅಲ್ಲಿಗೆ ಹೋಗಿದ್ದಾರೆ. ತಾವು ಒಂದು ಐದು ನಿಮಿಷ ಬಂದರೆ ಮಕ್ಕಳಿಗೆ ಬಹಳ ಸಂತೋಷವಾಗುತ್ತದೆ".

"ಲಿಲ್ಲಿಯವರು ಬಂದಾಗ ಆಗುವಷ್ಟು ಪ್ರಯೋಜನ ನಾನು ಬಂದರೆ ಆಗುವುದಿಲ್ಲ. ನಿಮ್ಮ ಶಾಲೆಯನ್ನು ನೋಡಬೇಕೆಂದು ನನಗೆ ಆಸೆ ಇದೆ. ಆದುದರಿಂದ ಬರುತ್ತೇನೆ" ಎಂದು ಹೇಳಿದವರೇ ಒಳಗಿನ ಕೊಠಡಿಗೆ ಹೋಗಿ ಒಂದು ಸಣ್ಣ ಪೆಪ್ಪರ್‌ಮೆಂಟು ಡಬ್ಬವನ್ನು ತೆಗೆದುಕೊಂಡು ಬಂದು "ಸಿಹಿ ಮಾತುಗಳಿಂದ ಮಕ್ಕಳ ಮನಸ್ಸು ಸಂತೋಷಪಡಿಸಲು ನನಗೆ ಬರುವುದಿಲ್ಲ. ಇದರ ಸಹಾಯದಿಂದ ಅವರನ್ನು ಸಂತೋಷಗೊಳಿಸಲು ಸಾಧ್ಯವೇ, ನೋಡೋಣ ನಡೆಯಿರಿ" ಎಂದು ಹೊರಟರು.

ಬಂಗಲೆಯ ಆವರಣದಲ್ಲಿದ್ದ ಇನ್ನೊಂದು ಮನೆಯ ಜಗುಲಿಯಮೇಲೆ ಇಪ್ಪತ್ತು ಇಪ್ಪತ್ತೈದು ಜನ ಬಾಲಕ ಬಾಲಕಿಯರು ಸಾಲಾಗಿ ಚಾಪೆಯ ಮೇಲೆ ಕುಳಿತಿದ್ದರು. ಹುಡುಗಿಯರು ಒಗೆದ ಬಟ್ಟೆಗಳನ್ನುಟ್ಟು ತಲೆ ಬಾಚಿ ಜಡೆಹೆಣೆದುಕೊಂಡು ಬಂದಿದ್ದರು. ಒಂದಲ್ಲ ಒಂದು ತರಹದ ಹೂವು ಮುಡಿಯದ ತಲೆ ಕಾಣುತ್ತಿರಲಿಲ್ಲ. ಹುಡುಗರೂ ಒಗೆದು ಮಡಿ ಮಾಡಿದ ಚಡ್ಡಿ ಷರಟುಗಳನ್ನು ಹಾಕಿಕೊಂಡು ತಲೆಯ ಕ್ರಾಪನ್ನು ಸರಿಯಾಗಿ ಬಾಚಿಕೊಂಡು ಚೊಕ್ಕಟವಾಗಿ ಕಾಣುತ್ತಿದ್ದರು. ಮಕ್ಕಳ ವಯಸ್ಸು ಐದರಿಂದ ಹತ್ತರವರೆಗೂ ಇರಬಹುದೆಂದು ತೋರುತ್ತಿತ್ತು. ಟಾನಸ್ಲೇಯವರೂ ಜಾನಯ್ಯನವರೂ ಬರುತ್ತಲೇ ಎಲ್ಲರೂ ಎದ್ದು "ನಮಸ್ಕಾರ್ರಯ್ಯ" ಎಂದರು.

ಜಾನಯ್ಯನವರು "ಒಳ್ಳೆಯದಪ್ಪಾ, ಏಸುವು ನಿಮ್ಮನ್ನು ಹರಸಲಿ. ಎಲ್ಲಿ ಎಲ್ಲರೂ ಒಟ್ಟಿಗೆ ಒಂದು ಕೀರ್ತನೆಯನ್ನು ಹಾಡೋಣ" ಎಂದು ತಾವು ಒಂದನ್ನು ಪ್ರಾರಂಭಿಸಿದರು. ಟಾನಸ್ಲೇಯವರೂ ಮಕ್ಕಳೂ ಅವರೊಡನೆ ಸೇರಿ 'ಪವಿತ್ರಾತ್ಮನ' ಮಹಿಮೆಯನ್ನು ಸ್ತುತಿಸಿದರು. ಅನಂತರ ಮಕ್ಕಳೆಲ್ಲರೂ ಸಾಲಾಗಿ ಚಾಪೆಯಮೇಲೂ, ಜಾನಯ್ಯನವರೂ ಟಾನಸ್ಲೇಯವರೂ ಒಂದು ಬೆಂಚಿನಮೇಲೆಯೂ ಕುಳಿತರು. ಜಾನಯ್ಯನವರು ಕಳೆದವಾರ ಮಕ್ಕಳಿಗೆ ಹೇಳಿದ್ದ ಬೈಬಲ್ಲಿನ ಕಥೆಯಮೇಲೆ ಸುಲಭವಾದ ಪ್ರಶ್ನೆಗಳನ್ನು ಹಾಕಿ ಮೊದಲಿಂದ ಕೊನೆಯವರೆಗೂ ಕಥೆಯ ಸಾರಾಂಶವನ್ನು ಬಾಲಕರಿಂದ ಹೇಳಿಸಿದರು. ಒಟ್ಟು ಕಥೆಯನ್ನೆಲ್ಲಾ

ಇನ್ನೊಬ್ಬ ಬಾಲಕನಿಂದ ಹೇಳಿಸಿನಮೇಲೆ ಆ ಕಥೆಯಿಂದ ತಿಳಿದುಕೊಳ್ಳ ಬೇಕಾದ ನೀತಿಯೇನೆಂಬುದನ್ನೂ ಮಕ್ಕಳಿಂದಲೇ ಹೇಳಿಸಿದರು.

ಅನಂತರ ಗೋಡೆಯಮೇಲೆ ಒಂದು ಅಂದವಾದ ದೊಡ್ಡ ಪಟವನ್ನು ನೇತುಹಾಕಿ ಅದರಲ್ಲಿ ಚಿತ್ರಿಸಿದ್ದ ಕಥೆಯನ್ನು ಸುಲಭವಾದ ಭಾಷೆಯಲ್ಲಿ ವಿವರಿಸಿ, ಸುಲಭವಾದ ಪ್ರಶ್ನೆ ಮತ್ತು ಚಿತ್ರದ ಸಹಾಯದಿಂದ ಕಥೆಯನ್ನು ಮಕ್ಕಳಿಂದ ಪುನಃ ಹೇಳಿಸಿ, ಟಾನಸ್ಲೇಯವರ ಕಡೆಗೆ ತಿರುಗಿ "ಒಂದು ಹೊಸ ಪ್ರಾರ್ಥನೆಯನ್ನು ಹೇಳಿಕೊಟ್ಟು ಇಂದಿನ ಶಾಲೆಯನ್ನು ಮುಗಿಸು ತ್ತೇನೆ" ಎಂದರು.

ಎಲ್ಲವನ್ನೂ ಕುತೂಹಲದಿಂದ ನೋಡುತ್ತಿದ್ದ ಪಾದ್ರಿಗಳು "ಸರಿ, ನೀವು ಹಾಗೆ ಮಾಡುವುದಕ್ಕೆ ಮುಂಚೆ ನಾನೂ ಸ್ವಲ್ಪ ಕೆಲಸಮಾಡಬೇಕು. ನೀವು ಪಾಠಕಲಿಸಿದಿರಿ. ನಾನು ಸ್ವಲ್ಪ ಆಟ ಕಲಿಸಲೇ?" ಎಂದು ಮುಗುಳ್ನಗೆ ನಗುತ್ತಾ ಜಾನಯ್ಯನವರ ಕಡೆ ನೋಡಿದರು.

ಮಕ್ಕಳ ಮುಖಗಳು ಅರಳಿದವು. ಆಸೆಯನ್ನು ವ್ಯಕ್ತಪಡಿಸುವ ಕಣ್ಣುಗಳನ್ನು ಜಾನಯ್ಯನವರ ಕಡೆಗೆ ಹೊರಳಿಸಿ ಉತ್ತರವನ್ನು ನಿರೀಕ್ಷಿಸ ಲಾರಂಭಿಸಿದರು. ಪಾದ್ರಿಗಳ ಅಭಿಪ್ರಾಯವನ್ನು ಜಾನಯ್ಯನವರು ವಿರೋ ಧಿಸುವರೇ? "ಅಗತ್ಯವಾಗಿ ಆಗಬಹುದು" ಎಂದು ಅವರು ಹೇಳುತ್ತಲೇ ಪಾದ್ರಿಗಳು ಮಕ್ಕಳನ್ನು ಜಗುಲಿಯಿಂದ ಕೆಳಕ್ಕೆ ಕರೆದುಕೊಂಡುಹೋಗಿ ಅವರನ್ನು ಎರಡು ಗುಂಪಾಗಿ ವಿಭಾಗಿಸಿ ತಮ್ಮ ಬಾಯಲ್ಲಿ ಶಿಲ್ಪಿಯನ್ನು ಇಟ್ಟುಕೊಂಡು ಅವರಿಂದ ಅರ್ಧಗಂಟೆ ಕೊಕ್ಕಾಟ ಆಡಿಸಿದರು. ಪಾದ್ರಿ ಯವರ ಉತ್ಸಾಹ ಓಡಾಟ ಆ ಆಟದಲ್ಲಿ ಭಾಗವಹಿಸಿದ್ದ ಯಾವ ಮಗುವಿನ ಉತ್ಸಾಹ ಓಡಾಟಗಳಿಗೂ ಕಡಮೆಯಾಗಿರಲಿಲ್ಲ. ಎಲ್ಲವನ್ನೂ ಜಗುಲಿಯ ಮೇಲಿಂದ ನೋಡುತ್ತಿದ್ದ ಜಾನಯ್ಯನವರಿಗೆ ಇಲ್ಲಿ ಮಕ್ಕಳೊಂದಿಗೆ ಮಕ್ಕ ಳಾಗಿ ಆಡುತ್ತಿರುವ ಈ ಬೆಳೆದ ಮಡುಗನೇ ಒಂದು ಗಂಟೆಯ ಹಿಂದೆ ದೇವಾಲಯದಲ್ಲಿ ನರೆತ ಕೂದಲಿನ ಮುದುಕರಿಗೂ ಸಹ ದಾರಿತೋರಿಸುವ ರೀತಿಯಲ್ಲಿ ಏಸುವಿನ ವಾಕ್ಯಗಳ ತಿರುಳನ್ನು ತೋರಿಸಿದ ವಾಗ್ಮಿಯಾಗಿದ್ದನೇ?

ಎಂದು ಸಂಶಯ ಪಡುವಂತಾಯಿತು. ಮಕ್ಕಳ ಮೈ ಬೆವರಿ ಓಡಾಟದ ಬಿರುಸು ಕಡಮೆಯಾಗುತ್ತ ಬಂತು. ಬೆವರಿನ ಕಾಲುವೆ ಮುಖದಮೇಲೆ ಇಳಿಯಲಾರಂಭವಾಯಿತು. ಟಾನಸ್ಲೇಯವರು ದೀರ್ಘವಾಗಿ ಶಿಲ್ಪಿಯನ್ನು ಊದಿ ಆಟ ನಿಲ್ಲಿಸಿ, ಮಕ್ಕಳನ್ನು ಸಾಲಾಗಿ ನಿಲ್ಲಿಸಿ ತಂದಿದ್ದ ಪೆಪ್ಪರು ಮೆಂಟುಗಳನ್ನು ಹಂಚಿದರು. ಜಾನಯ್ಯನವರು ಒಂದು ಹೊಸ ಪ್ರಾರ್ಥನಾ ಗೀತೆಯನ್ನು ಹೇಳಿಕೊಟ್ಟಮೇಲೆ ಎಲ್ಲರೂ ಮನೆಗಳಿಗೆ ಹೋಗಬಹುದೆಂದು ಅಪ್ಪಣೆಕೊಟ್ಟರು. ಮಕ್ಕಳ ಆನಂದ ಹೇಳತೀರದು. ಒಬ್ಬರ ಕೈನ ಪೆಪ್ಪರ ಮೆಂಟನ್ನು ಮತ್ತೊಬ್ಬರು ಪರೀಕ್ಷಿಸುತ್ತಾ ತಮ್ಮ ಕೈಗಳಲ್ಲಿದ್ದ ಪೆಪ್ಪರಮೆಂಟಿನ ಬಣ್ಣವೇ ಉತ್ತಮವಾದದ್ದೆಂದೂ ಹೆಚ್ಚು ರುಚಿಕರವಾದದ್ದೆಂದೂ ಜಗಳ ವಾಡುತ್ತಾ ಮನೆಗಳಿಗೆ ಹೊರಟರು. ದೇವರು ಒಬ್ಬನೆಂದೂ ಸಕಲ ಚರಾ ಚರಗಳನ್ನೂ ಸೃಷ್ಟಿಸಿದವನು ಆತನೇ ಎಂದೂ ಪ್ರತಿಯೊಂದು ಮತವೂ ಹೇಳುತ್ತಿರುವುದನ್ನು ತಿಳಿದಿರುವ ಮತಾನುಯಾಯಿಗಳು ತಮ್ಮ ಮತದಲ್ಲಿ ಪ್ರತಿಪಾದನೆ ಮಾಡಿರುವ ದೇವರೇ ದೊಡ್ಡವನೆಂದೂ ಇತರ ಮತಗಳ ದೇವರು ದೇವರಲ್ಲೆಂದೂ ಜಗಳವಾಡುವಾಗ ತಮಗೆ ಆ ದಿನ ಹಂಚಲ್ಪಟ್ಟ ಪೆಪ್ಪರುಮೆಂಟುಗಳೆಲ್ಲಾ ಒಂದೇ ಡಬ್ಬದ್ದೆಂದೂ, ಅವನ್ನೆಲ್ಲಾ ಒಂದೇ ರೀತಿಯನೆಂದು ಆರಿಸಿ ಒಟ್ಟಾಗಿ ಆ ಡಬ್ಬದಲ್ಲಿ ಹಾಕಿದ್ದಿತೆಂದೂ ತಿಳಿಯದ ಆ ಮಕ್ಕಳು ತಮ್ಮ ತಮ್ಮ ಪೆಪ್ಪರುಮೆಂಟುಗಳೇ ಉತ್ಕೃಷ್ಟವಾದುವೆಂದು ಹೇಳಿದರೆ ಆಶ್ಚರ್ಯವೇನು?

ಟಾನಸ್ಲೇಯವರು ಜಾನಯ್ಯನವರ ಕಡೆ ತಿರುಗಿ "ನಾನು ಹೇಳಿದ ಎಲ್ಲಾ ಸಿದ್ಧತೆಗಳನ್ನು ಮಾಡಿಕೊಂಡು ಬನ್ನಿ. ನಾನು ಮೋಟಾರನ್ನು ಬಾಗಿಲಿಗೆ ತಂದಿರುತ್ತೇನೆ" ಎಂದು ಹೇಳಿ ಅವರನ್ನು ಕಳುಹಿಸಿ ಕುಣಿ ಯುತ್ತ, ನೆಗೆಯುತ್ತ ಹೋಗುತ್ತಿರುವ ಅಲ್ಪ ಸಂತುಷ್ಟರಾದ ಮಕ್ಕಳನ್ನು ನೋಡುತ್ತಾ ಮಕ್ಕಳ ವಿಷಯವಲ್ಲಿ ಏಸುವು ಆಡಿರುವ ಮಾತುಗಳನ್ನು ಜ್ಞಾಪಿಸಿಕೊಳ್ಳುತ್ತಾ ಪ್ರಫುಲ್ಲಚಿತ್ತರಾಗಿ ಬಂಗಲೆಗೆ ಬಂದರು.

ಜಾನಯ್ಯನವರು ತಮ್ಮ ಸಿದ್ಧತೆಗಳನ್ನು ಮಾಡಿಕೊಂಡು ಪಾದ್ರಿ ಯವರ ಬಳಿಗೆ ಬರುವ ಹೊತ್ತಿಗೆ ಲಿಲ್ಲಿಯವರು ಅರಮನೆಯಿಂದ ಹಿಂದಿರು

ಗಿದರು. ಪಾದ್ರಿಗಳು ತಾವು ಹೊರಟಿರುವ ವಿಷಯವನ್ನು ತಿಳಿಸಿ "ನೀನೂ ಬರುವೆಯಾ ಲಿಲ್ಲೀ"? ಎಂದರು.

"ಅರಮನೆಗೆ ಸ್ವಲ್ಪ ಔಷಧಿ ಮಾಡಿ ಕಳುಹಿಸಬೇಕು. ಇನ್ನು ಒಂದು ಅರ್ಧಗಂಟೆ ಸಾವಕಾಶವಾಗುತ್ತೆ. ಅಷ್ಟುಹೊತ್ತು ಕಾಯುವಿರಾ?"

"ನಿನಗೆ ಈಗಾಗಲೇ ಆಯಾಸ. ಮತ್ತೆ ಏಕೆ ಬರಬೇಕು? ನಾನೂ ಜಾನಯ್ಯನವರೂ ಹೋಗಿ ಬರುತ್ತೇವೆ. ನೀನು ಔಷಧಿಮಾಡಿ ಮುಗಿಸುವ ವೇಳೆಗೆ ನಾವು ಹಿಂತಿರುಗುತ್ತೇವೆ".

"ಹಾಗಿದ್ದರೆ ಹೊರಡಿರಿ. ನೀವು ಬೇಗ ಬಂದರೆ ಸ್ವಲ್ಪ ಹೊರಗೆ ತಿರುಗಾಡಿಕೊಂಡು ಬರೋಣ".

"ಖಂಡಿತ ಬೇಗ ಬರುತ್ತೇವೆ. ನೀನು ಹೊರಗೆ ಹೋಗೋಣ ಎಂದು ಹೇಳುವುದೇ ಬಹಳ ಕಡಿಮೆ; ಈ ದಿನ ನಿನ್ನ ಜೊತೆ ಹೊರಗೆ ತಿರುಗಾಡುವ ಅವಕಾಶ ನಾನು ಏಕೆ ಕಳೆದುಕೊಳ್ಳಬೇಕು" ಎಂದು ಹೇಳಿ ಟಾನಸ್ಲೇ ಯವರು ಮೋಟಾರು ಸಮೀಪಕ್ಕೆ ಬಂದು ಅದರ ಬಾಗಿಲು ತೆಗೆದು ಹಿಡಿದುಕೊಂಡು "ಒಳಗೆ ಹೋಗಿ ಜಾನಯ್ಯ" ಎಂದು ಹೇಳಿ, ಅವರು ಒಳಗೆ ಹೋಗಿ ಕುಳಿತುಕೊಳ್ಳುತ್ತಲೇ ತಾವೂ ಒಳಗೆ ಹತ್ತಿ "ಬೇಗ ಬಂದು ಬಿಡುತ್ತೇವೆ ಲಿಲ್ಲೀ" ಎಂದು ಹೇಳುತ್ತಾ ಮೋಟಾರನ್ನು ಸ್ವತಃ ನಡೆಸಿಕೊಂಡು ಬಂಗಲೆಯಿಂದ ಹೊರಹೊರಟರು.

ಆವರಣದ ಬಾಗಿಲಿಂದ ಹೊರಟ ಮೋಟಾರು ಬಲಭಾಗಕ್ಕೆ ತಿರುಗಿತು. ಅದೇ ವೇಳೆಯಲ್ಲಿ ಹತ್ತಿರದಲ್ಲಿದ್ದ ವೃತ್ತದಿಂದ ಇನ್ನೊಂದು ಮೋಟಾರು ಶಬ್ದಕ್ಕಿಂತಲೂ ಹೆಚ್ಚು ವೇಗದಿಂದ ಬಂದುಬಿಟ್ಟಿತು. ಜಾನಯ್ಯನವರೊಡನೆ ಏನೋ ಮಾತನಾಡುತ್ತ ನಿಧಾನವಾಗಿ ಮೋಟಾರನ್ನು ನಡೆಸುತ್ತಿದ್ದ ಪಾದ್ರಿಗಳಿಗೆ ಮೈಮರೆತು ನಡೆಸುತ್ತಿರುವ ಸಂಚಾಲಕನ ಕೈಗೆ ಸಿಕ್ಕಿ ಸಿಡಿಲಿನಂತೆ ಬರುತ್ತಿರುವ ಮೋಟಾರಿನ ಸುಳಿವು ತಿಳಿಯುವುದಕ್ಕೆ ಮುಂಚೆಯೇ, ಅದು ಇವರಗಾಡಿಗೆ ಢಿಕ್ಕಿಹೊಡೆದು ಮಗ್ಗುಲಾಗಿ ಉರುಳಿಸಿ

ಅದರ ಯಂತ್ರದಮೇಲೆ ಹರಿದು ತಾನೂ ಕೆಳಗೆ ಮುಗುಚಿಕೊಂಡಿತು. ಘರ್ಷಣೆಯ ಶಬ್ದ, ಪುಡಿಪುಡಿಯಾದ ಗಾಜಿನ ಶಬ್ದ ಹೃದಯವನ್ನು ನಿರ್ಭೇದಿಸುತ್ತಿದ್ದವು. ಬಂಗಲೆಯ ಮೆಟ್ಟಲುಗಳಮೇಲೆ ನಿಂತಿದ್ದ ಲಿಲ್ಲಿಯವರಿಗೆ ಕರ್ಣಕಠೋರವಾದ ಈ ಶಬ್ದ ಕೇಳುತ್ತಲೇ " ಏನುಮೇ ಇದೇನು!" ಎಂದು ಕೂಗುತ್ತಾ ಓಡಿಬಂದರು. ಟಾನಸ್ಲೇಯವರ ಮೋಟಾರು ಮರಣ ಸಂಕಟದಲ್ಲಿ ಬಿದ್ದು ಒದ್ದಾಡುತ್ತಿರುವ ಸಣ್ಣ ಆನೆಯಂತೆ ಕೆಳಗೆ ಬಿದ್ದಿದೆ. ಆದರೆ ಚಕ್ರಗಳು ಇನ್ನೂ ಸುತ್ತುತ್ತಲೇ ಇವೆ. ಮುಂಭಾಗ ದೊಡ್ಡ ಬಂಡೆಯನ್ನು ಎತ್ತಿಹಾಕಿದಹಾಗೆ ತಗ್ಗಿಹೋಗಿದೆ. ಚಕ್ರಗಳಿಗೆ ಚಲನ ಶಕ್ತಿಯನ್ನು ಕೊಟ್ಟು ಸರಿಯಾದ ಮಾರ್ಗದಲ್ಲಿ ಬಿಡುತ್ತಿದ್ದ ಕೈಗಳು ನಿರ್ಜೀವವಾದಂತೆ ಕೆಳಗೆ ಬಿದ್ದಿವೆ. ಪಾದ್ರಿಯವರಿಗೆ ಸ್ಮರಣೆ ತಪ್ಪಿದೆ. ಅವರ ಮೇಲೆ ಜಾನಯ್ಯನವರು ಬಿದ್ದಿದ್ದಾರೆ. ಅವರಿಗೂ ಸ್ಮರಣೆ ತಪ್ಪಿದೆ. ಇಬ್ಬರ ಮುಖಕ್ಕೂ ಗಾಜಿನ ಚೂರುಗಳು ಹೊಕ್ಕು ಗಾಯಗಳಿಂದ ರಕ್ತ ಸ್ರವಿಸುತ್ತಿದೆ. ಇದೆಲ್ಲವನ್ನೂ ನೋಡಿ ಲಿಲ್ಲಿಯವರು ಕೈ ಕೈ ಹಿಸುಕಿಕೊಳ್ಳುತ್ತಾ ಸಹಾಯಕ್ಕೆ ಯಾರನ್ನು ಕರೆಯಬೇಕೆಂದು ಸುತ್ತಲೂ ನೋಡುತ್ತಿರುವಷ್ಟರಲ್ಲಿ ಆವರಣದ ಗೋಡೆಯನ್ನು ಹಾರಿ ಮೆಥೂಸಲನು ಬಂದವನೇ "ಯಾರಾದರೂ ಸಹಾಯಕ್ಕೆ ಬನ್ನಿರಪ್ಪಾ, ಅನಾಹುತವಾಗಿದೆ" ಎಂದು ಕೂಗುತ್ತಾ ಹುಚ್ಚನಂತೆ ವೃತ್ತಗಕಡೆಗೆ ಓಡಿದನು.

ಹೊತ್ತು ಮುಳುಗಿತ್ತು. ನಸುಗತ್ತಲೆ. ಮೇಲಾಗಿ ಇದು ಜನರು ಹೆಚ್ಚಾಗಿ ಓಡಾಡುವ ರಸ್ತೆ ಅಲ್ಲ. ಜನಸೇರಲು ಸ್ವಲ್ಪ ಹೊತ್ತು ಹಿಡಿಯಿತು. ಕಣ್ಣಿನಲ್ಲಿ ನೀರು ಬೊಟ್ಟಾಡಿಸುತ್ತಾ ಲಿಲ್ಲಿಯವರೇ ಎದುರಿಗೆ ನಿಂತುಕೊಂಡು ಹೆಚ್ಚು ಅಪಾಯವಾಗದ ರೀತಿಯಲ್ಲಿ ಬಿದ್ದಿರುವವರನ್ನು ಎತ್ತಿ ಸರಿಯಾಗಿ ಮಲಗಿಸಿ ಢಿಕ್ಕಿ ಹೊಡೆದ ಮೋಟಾರಿನ ಕಡೆ ಹೊರಟರು. ಅದರೊಳಗೆ ಇದ್ದವನು ಒಬ್ಬನೇ. ಗಾಡಿಯನ್ನು ಬೇಕಾದತ್ತ ತಿರುಗಿಸಲು ಸಾಧನವಾದ ಚಕ್ರ ಮುರಿದು ಅದರ ಕೋಲು ಆತನ ಹೃದಯವನ್ನು ಭೇದಿಸಿದ್ದಿತು. ರಕ್ತವು ಧಾರಾಕಾರವಾಗಿ ಸುರಿದಿದ್ದಿತು. ಆತನು ಮನುಷ್ಯಸಹಾಯದ ಎಲ್ಲೆಯನ್ನು ದಾಟಿ ಹೋಗಿದ್ದನು. ನಿಟ್ಟುಸಿರುಬಿಡುತ್ತಾ ಕೆನ್ನೆಯಮೇಲೆ

ಹರಿಸು ಬರುತ್ತಿರುವ ಕಂಬನಿಗಳನ್ನು ಕಷ್ಟದಿಂದ ತಡೆಯುತ್ತಾ, ಲಿಲ್ಲಿಯುವರು ಮೆಥೂಸಲನನ್ನು ಕರೆದು ಬೇಗ ಓಡಿಹೋಗಿ ಆಸ್ಪತ್ರೆಗೆ ವರ್ತಮಾನವನ್ನು ಕೊಟ್ಟು ಗಾಯಗೊಂಡವರನ್ನು ಸಾಗಿಸುವ ಗಾಡಿಯನ್ನು ತರಲು ಹೇಳಿದರು. ಆ ಸಮಯಕ್ಕೆ ಅಲ್ಲಿಗೆ ಬಂದ ಇನ್ನೊಂದು ಮೋಟಾರು ಮಾಲೀಕನು ಯತ್ಕಿಂಚತ್ಸಹಾಯ ಮಾಡಲು ಮೆಥೂಸಲನನ್ನು ತನ್ನ ಮೋಟಾರಿನಲ್ಲಿ ಕೂರಿಸಿಕೊಂಡು ಆಸ್ಪತ್ರೆಗೆ ಹೊರಟನು.

ಲಿಲ್ಲಿಯುವರು ಸ್ಮೃತಿತಪ್ಪಿ ಬಿದ್ದಿರುವ ಎರಡು ದೇಹಗಳ ನಡುವೆ ಕುಳಿತು ಜನರನ್ನು ದೂರ ನಿಲ್ಲಿಸಿ ಮೆಲ್ಲಗೆ ಗಾಳಿ ಹಾಕಲಾರಂಭಿಸಿದರು. ಅಷ್ಟುಹೊತ್ತಿಗೆ ಪೋಲೀಸಿನವರು ಅಲ್ಲಿಗೆ ಬಂದು ಪ್ರಶ್ನೆಗಳ ಸುರಿಮಳೆಗೆ ಆರಂಭಿಸಿದರು. ಲಿಲ್ಲಿಯವರು ಮೃತಪಟ್ಟ ಮನುಷ್ಯನನ್ನು ತೋರಿಸುತ್ತಾ "ಅಜಾಗರೂಕತೆಯಿಂದ ಮೋಟರು ನಡೆಸಿದ ಆ ಪ್ರಾಣಿಯು ಅದರ ಫಲ ವನ್ನು ಕೂಡಲೇ ಅನುಭವಿಸಿದ್ದಾನೆ. ಈ ಇಬ್ಬರ ಗತಿ ಏನಾಗುವುದೋ ಈಗ ತಿಳಿಯುವುದಿಲ್ಲ. ಅಕಸ್ಮಾತ್ತು ಹೀಗೆ ಆಯಿತೆಂದು ಬರೆದುಕೊಳ್ಳಿರಿ. ಯಾರಿಗೂ ಅನ್ಯಾಯವಿಲ್ಲ" ಎಂದು ಹೇಳಿ ಸುಮ್ಮನಾದರು.

ಆಸ್ಪತ್ರೆಯ ಗಾಡಿಯೂ, ಸುಶಿಕ್ಷಿತರಾದ ದಾದಿಯರೂ, ಮುಖ್ಯ ವೈದ್ಯರೂ ಸ್ಥಳಕ್ಕೆ ಬಂದರು. ಟಾನಸ್ಲೇಯವರನ್ನೂ ಜಾನಯ್ಯನವರನ್ನೂ ಎತ್ತಿ ಗಾಡಿಯಲ್ಲಿ ಮಲಗಿಸಿದರು. ಕರವಸ್ತ್ರದಿಂದ ಕಣ್ಣೊರಸಿಕೊಳ್ಳುತ್ತಾ ಸುತ್ತಲೂ ಸಹಾಯಕ್ಕಾಗಿ ಬಂದು ನಿಂತಿದ್ದ ಜನರನ್ನು ನೋಡಿ "ನಿಮ್ಮಿಂದ ಬಹಳ ಉಪಕಾರ ಆಯಿತು. ದೇವರು ನಿಮಗೆ ಒಳ್ಳೆಯದು ಮಾಡಲಿ. ನಿಮಗೆ ಬಹಳ ವಂದನೆಗಳು" ಎಂದು ಹೇಳುತ್ತಾ ಲಿಲ್ಲಿಯವರು ಗಾಡಿ ಯನ್ನು ಹತ್ತಿದರು. ಜನರ ಗುಂಪು "ಎಂತಹ ಧೈರ್ಯಶಾಲಿ ಹೆಂಗಸು! ನಮ್ಮ ಹೆಂಗಸರಾಗಿದ್ದರೆ ಗಾಯಗೊಂಡವರ ಉಪಚಾರವನ್ನು ಬಿಟ್ಟು ಅವರ ಗೋಳನ್ನು ಸ್ತ್ರೀಮಿತಕ್ಕೆತರಲು ಬಂದವರಲ್ಲಿ ಅರ್ಧಜನ ಕಷ್ಟಪಡಬೇಕಾಗು ತ್ತಿತ್ತು!" ಎಂದುಕೊಳ್ಳುತ್ತಾ ಕರಗಲಾರಂಭಿಸಿದರು.

ಟಾನಸ್ಲೇಯವರು ಹೊರಬಿದ್ದುದು ಎಲ್ಲಿಗೆ, ಎಂತಹ ಮನೋಭಾವನೆ

ಯಿಂದ; ಈಗ ಅವರು ಹೋಗುತ್ತಿರುವುದು ಎಲ್ಲಿಗೆ, ಎಂತಹ ರೀತಿಯಲ್ಲಿ. ಕಾಲು ಗಂಟೆಯಲ್ಲಿ ಎಂತಹ ವೆತ್ಯಾಸ? ಸಂಕಲ್ಪ, ಪ್ರಯತ್ನ ಮಾನವನ ಅಧೀನ. ಸಫಲವಾಗುವುದೂ ವಿಫಲವಾಗುವುದೂ ಭಗವಂತನ ಅಧೀನ.

## ೧೨

ಅದೇ ದಿವಸ ಸಾಯಂಕಾಲ ಶ್ರೀಕಂಠಯ್ಯನೂ ಬಹಳ ಚಿಂತಾ ಕ್ರಾಂತನಾಗಿದ್ದನು. ಆದಿನ ಬೆಳಗ್ಗೆ ಸಂಬಂಧಪಟ್ಟ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಸ್ನೇಹಿತನೊಬ್ಬನಿಂದ ಪ್ರಸಂಗತ್ವೇನ ಗ್ರಂಥಸ್ಪರ್ಧೆಯ ಮಾತು ಬಂದಾಗ ಆಹ್ವಾನ ಕಳುಹಿಸಿದ್ದ ಎಲ್ಲ ವಿದ್ವಾಂಸರಿಂದಲೂ ಗ್ರಂಥ ಗಳು ಬಂದ ವಿಚಾರ ಆತನಿಗೆ ತಿಳಿಯಬಂತು. ಸ್ಪರ್ಧೆಯ ವಿಚಾರವೇ ತಿಳಿಯದಿದ್ದ ಶರ್ಮರಿಂದ ಗ್ರಂಥ ಹೇಗೆ ಬಂತೆಂಬುದನ್ನು ಮನಸ್ಸಿನಲ್ಲಿ ಯೋಚಿಸಲಾರಂಭಿಸಿದನು. ಕೊನೆಗೆ ಸಿದ್ದನು ತನ್ನ ಕೆಲಸ ಸಾಧಿಸಿ ಕೊಳ್ಳುವ ಉದ್ದೇಶದಿಂದ ಸುಳ್ಳು ಹೇಳಿರಬೇಕೆಂದು ನಿಶ್ಚಯಿಸಿದನು. ಪ್ರತಿ ಮಾನವನಿಗೂ ತನ್ನ ಬುದ್ಧಿವಂತಿಕೆಯಲ್ಲಿ ಅಭಿಮಾನ ಬಹಳ. ಇನ್ನೊಬ್ಬರಿಂದ ವಂಚಿತನಾದುದು ಮನವರಿಕೆಯಾಗರೆ ಆಗುವ ನೋವು ಎರಡು ತರಹದ್ದು. ಮೋಸದಿಂದ ಉಂಟಾಗುವ ನಷ್ಟ ಒಂದು. ಅದಕ್ಕಿಂತ ಹೆಚ್ಚಾಗಿ ತನ್ನ ಪ್ರತಿಭೆಗೆ ಕುಂದುಕ ಬಂತೆಂಬುದು. ಈ ಎರಡನೆಯ ರೀತಿಯ ನೋವು ಶ್ರೀಕಂಠಯ್ಯನಿಗೆ ಸ್ವಲ್ಪ ಹೆಚ್ಚಾಗಿಯೇ ಆಗಿದ್ದಿತು. ನಂಬುವಂತೆ ಸುಳ್ಳು ಹೇಳಿ ತನ್ನಿಂದ ಪ್ರಯೋಜನಪಡೆದ ಸಿದ್ದನು ವಿದ್ಯೆಯ ಗಂಧವನ್ನರಿಯದ ಅನಾಗರಿಕ ಹಳ್ಳಿಯವ; ತಾನು ವಿದ್ಯಾವಂತ ನಾಗರಿಕ ಪಟ್ಟಣಿಗ; ಸಮಾನಸ್ಕಂದರಿಂದ ಸೋಲಿಸಲ್ಪಟ್ಟರೆ ಅವಮಾನ ಅಸಹನೀಯ. ಬಹಳ ಕಡಿಮೆ ಅಂತಸ್ತಿನಲ್ಲಿರುವವನ ಕೈ ಮೇಲಾದರೆ ಆ ನೋವನ್ನು ಸರಿಯಾಗಿ ವರ್ಣಿಸುವ ಗುಣವಾಚಕಗಳು ಸಿಕ್ಕುವುದು ಕಷ್ಟ. ಹಣ ಕಾಸಿನ ನಷ್ಟವೇನೋ ಇಲ್ಲದಿದ್ದರೂ ಅದಕ್ಕೂ ಹೆಚ್ಚಿನ ಮಾನನಷ್ಟ ಇದ ರಿಂದ ಉಂಟಾಗಿದೆ. ಆ ದಿನ ಗುರುಗಳಲ್ಲಿ ಹೋಗಿ ಶರ್ಮರ ಗ್ರಂಥ ಮಹಾರಾಜರ ಕೈ ಸೇರದಂತೆ ಮಾಡುವೆನೆಂದು ತಿಳಿಸಿದ್ದಾಯಿತು. ಈಗ

ಗುರುಗಳಿಗೆ ಮುಖ ಹೇಗೆ ತೋರಿಸುವುದು? ಅದು ಬಗೆ ಹರಿಯದ ಸಮಸ್ಯೆಯಾಗಿದೆ. ಯೋಚನೆ ಮಾಡುತ್ತಾ ಮಾಡುತ್ತಾ ಶ್ರೀಕಂಠಯ್ಯನಿಗೆ ಸಿದ್ದನಮೇಲೆ ಬಹಳ ಕೋಪ ಬಂದಿತು. ಮೊದಲು ಅವನ ನೀಚತನವನ್ನು ಅವನಿಗೆ ತೋರಿಸಿಕೊಟ್ಟು ಮನಸ್ಸು ಬೈದು, ಅವನ ಮನಸ್ಸಿಗೆ ಸಾಧ್ಯವಾದಷ್ಟು ನೋವುಂಟುಮಾಡಿ ತನ್ಮೂಲಕ ತನ್ನ ಮನಸ್ಸಿನ ಭಾರವನ್ನು ಸ್ವಲ್ಪ ಕಡಿಮೆ ಮಾಡಿಕೊಂಡು ಅನಂತರ ಗುರುಗಳಲ್ಲಿ ಹೋಗಿ ನಡೆದ ಸಂಗತಿ ವಿಜ್ಞಾಪಿಸಿಕೊಂಡು ಕ್ಷಮಾಪಣೆ ಬೇಡಿಕೊಳ್ಳಬೇಕೆಂದು ನಿಶ್ಚಯ ಮಾಡಿಕೊಂಡನು.

ಶ್ರೀಕಂಠಯ್ಯನು ಸಿದ್ದನನ್ನು ಛಿದ್ರ ಛಿದ್ರ ಮಾಡಬೇಕೆಂದು ಕತ್ತಿಯನ್ನು ಮಸೆಯುತ್ತಿದ್ದಾಗಲೇ ಸಿದ್ದನಿಂದ ತನ್ನ ಮರ್ಯಾದೆಯು ಹೋಯಿತೆಂದು ಇನ್ನೊಬ್ಬ ವ್ಯಕ್ತಿಯೂ ಆ ಬಡಪಾಯಿಯನ್ನು ಚೂರು ಚೂರು ಮಾಡಲು ಸರಿಯಾದಂಥ ವಾಗ್ಬಾಣಗಳನ್ನು ಜೋಡಿಸಿ ಬತ್ತಳಿಕೆಯಲ್ಲಿಡುತ್ತಿದ್ದನು. ಅವನೇ ಶರ್ಮರ ನಚ್ಚಿನ ಆಳು ರಂಗ. ಶರ್ಮರೇನೋ 'ಸಿದ್ದನ ವಿಚಾರ ಬಿಟ್ಟು ಬಿಡು' ಎಂದರು. ಆದರೆ 'ಅವನಿಗೆ ಸರಿಯಾದ ಪಾಠ ಕಲಿಸಬೇಕು' ಎಂದು ರಂಗನು ಅದೇ ರಾತ್ರಿ ಶ್ರೀಕಂಠಯ್ಯನವರು ಸಿದ್ದನ ಮನೆಯ ಕಡೆ ಬರುವುದಕ್ಕೆ ಸ್ವಲ್ಪ ಮೊದಲು ಹೊರಟನು. ಆಲಿಕಲ್ಲಿನ ಮಳೆ ಬರುವ ಮುಂಚೆ ಗುಡುಗು ಸಿಡಿಲು ಬರುವುವಲ್ಲವೇ?

ರಾತ್ರಿ ಸುಮಾರು ಎಂಟು ಗಂಟೆಯಾಗಿರಬಹುದು. ಮನೆಯ ಮುಂದೆ ನಡುರಸ್ತೆಯಲ್ಲಿ ನಿಂತುಕೊಂಡು "ಸಿದ್ದಾ, ಸಿದ್ದಾ" ಎಂದು ಶ್ರೀಕಂಠಯ್ಯನು ಕೂಗಿದನು. ಉತ್ತರ ಬರಲಿಲ್ಲ. ಇನ್ನೂ ಹತ್ತಿರದಿಂದ ಕೂಗೋಣವೆಂದು ಬಾಗಿಲ ಹತ್ತಿರ ಹೋದನು. ಒಳಗೆ ಗಟ್ಟಿಯಾಗಿ ಮಾತನಾಡುತ್ತಿದ್ದ ಶಬ್ದ ಕೇಳಿತು. ಮಾತನಾಡುತ್ತಿದ್ದವರಲ್ಲಿ ಒಬ್ಬನು ಸಿದ್ದ ಇನ್ನೊಬ್ಬನು ರಂಗ. ಇಬ್ಬರ ನಡುವೆ ಇಟ್ಟಿದ್ದ ತಟ್ಟೆಯಲ್ಲಿ ಇದ್ದ ವಿಳ್ಯೇದೆಲೆ ಅಡಕೆ ಸುಣ್ಣ ಇಬ್ಬರೂ ಮುಟ್ಟಿರಲಿಲ್ಲ. ಇಬ್ಬರ ನಾಲಿಗೆಗಳೂ ಬೇರೆ ಕೆಲಸದಲ್ಲಿ ತೊಡಗಿದ್ದುವು. ಕಿವಿಗೆ ಬಿದ್ದ ಒಂದೆರಡು ಮಾತುಗಳು ಸಾಧ್ಯವಾದಷ್ಟನ್ನು

ಕೇಳಬೇಕೆಂಬ ಆಸೆಯನ್ನು ಉಂಟುಮಾಡಿದುವು. ಆದುದರಿಂದ ಪುನಃ ಕೂಗದೆ ಒಳಗಿನ ಸಂಭಾಷಣೆಯನ್ನು ಕೇಳುತ್ತ ನಿಂತನು.

“ಬಿಡು ಬಿಡು ರಂಗಣ್ಣ. ಸುಮ್ನೆ ಸಿಟ್ಟು ಮಾಡ್ಬೇಡ. ನಾನೇನು ಮಾಡ್ದೆ”?

“ಇನ್ನೇನ್ಮಾಡ್ಬೇಕಿತ್ತು. ಕತ್ತಿ ತಕೊಂಡು ಕತ್ತೇ ಕುಯ್ಬೇಕಾ? ಮಾನ ಹೋದರೇನು ಪ್ರಾಣ ಹೋದರೇನು”?

“ಅದೇನಂಥಾ ಮಾನ ನಾ ಕಳದ್ದು”?

“ಅಲ್ಕಣೋ, ಅಂತ ಮುಖ್ಯವಾದ ಕಾದಗಾನ ಬುದ್ಧಿಯೋರ ಕೈಗೆ ತಲ್ಪಿಸದೇ ಅವರ ಮಾನ ಕಳದಿದ್ದಿಯಲ್ಲಾ. ಅವರ ಮಾನ ಹೋದ್ರೇನು ನನ್ಪ್ರಾಣ ಹೋದರೇನು? ನೀನು ನಂಬಕಸ್ತ. ಕೆಲಸ ಸರೀಗಮಾಡತೀಯ ಅಂತಾ ನಾನು ಹೇಳಿದ್ಕಲ್ವಾ ನಿನ್ನ ಅವರು ಮಡಕ್ಕಂಡದ್ದು. ನಾಷ್ಟೇ ಯೋಗಿರಲಿಲ್ವಾ ಬಂದ ಕಾದಗಾ ಎಲ್ಲಾ ಮೊದಲು ಬುದ್ಧಿಯೋರಿಗೆ ತೋರಿಸಬೇಕೇದು. ನಂಗೆ ಮರ್ವಾದೇ ತಂದೇ”.

“ಕಾಗದ ಬಂದಾಗ ಅವರು ಉಣ್ಣುತಿದ್ದರಪ್ಪಾ, ಅವರ ಮೇಜದ ಮೇಗಿಟ್ಟೆ. ಬ್ರಾಮ್ಮಣರು ಉಣ್ಣೋತಳಕ್ಕೆ ನಾನು ಹೋಗಿ ಕೊಡಬೇಕಿತ್ತಾ”?

“ಹೋಗೋ ಏನು ಮಾತಾಡ್ತೀ. ಅವರು ಬಂದಮೇಲೆ ಕೊಡಬೇಕಿತ್ತು”.

“ಕಾಜಗಾ ಮೇಜಿನಮೇಲೆ ದೆವ್ವ ಕೂತಂಗೆ ಕೂತಿತ್ತು. ಅದೇನು ಚಿಕ್ಕ ಪುಟ್ಟ ಕಾಜಗವಾ. ಆ ಲಕ್ಕೊಟ್ಯಾಗೇ ನಮ್ಮಪ್ಪ ಒಂದು ವಾರ ಹಾಕ್ಕೊಳ್ಳೋಸು ಕಡ್ಡೀಪುಡಿ ತುಂಬಬಯ್ದಿತ್ತು. ಅವರಾಗವ್ರೇ ನೋಡಿಕೊಳ್ಳಿದ್ರೂ ಅದಾಗದೇ ಅವರ ಕಣ್ಣಿಗೆ ಬೀಳ್ತದೆ ಅಂತ ನಾ ತಿರುಗಿ ಯೇಳ್ಳಿಲ್ಲಾ. ಜೊತೀಗೆ ನನಗೂ ಹೊಟ್ಟೆ ತಾಳ ಹಾಕತಿತ್ತು. ಮನೇಕಡೆ ಬಂದ್ಬಿಟ್ಟೆ. ಸಂಜೆ ಕಸಾ ಬಳಿಯೋವಾಗ ಮೇಜಿನ ಕೆಳಗೆ ಬಿದ್ದಿತ್ತು.

ನೋಡಿ ಅಲ್ಲಿ ಬಿಸಾಕವ್ರೆ ಅಂತ ತಿಳಿದು ನೀನು ಹೇಳಿದ್ಯಲ್ಲಾ ಹಂಗೆ ತಂತೀಗೆ ಸಿಕ್ಕಿಸ್ದೆ. ಅದೆಲ್ಲಿ ಅಂತ ಕೇಳಿದ್ರೆ ಕೊಡೋಣ ಅಂತ. ಅದ್ರ ಕೆಳಗ್ಲ ಕಾಗದದ ಮೇಲೆ ಎಳ್ಡು ಗೆರೆ ಕೂಡ ಎಳ್ದೆ. ಅವರು ನೋಡಿಲ್ಲ ಅಂತ ನನಗೆ ಕನಸ್ಬೀಳ್ಬೇಕಾ"?

"ನಿನ್ನ ಮೂಗಿನ ನೇರಕ್ಕೆ, ಮಾತಾಡ್ಕೋತೀ. ಬುದ್ಧಿಯೋರ್ಗೆ ಎಂತಾ ತಕರಾರು ತಂದ್ಬಿಟ್ಟೆ ನಿನಗೆ ಗೊತ್ತೆ? ನಿನ್ನಮೇಲಿನ ಸಿಟ್ಟೆಲ್ಲಾ ನನ್ಮೇಲೆ ತೀರಿಸ್ಕೊಂಡ್ರು. ನಿಂಗೆ ಸಹಾಯ ಮಾಡಿದ್ದಕ್ಕೆ ನಂಗೆ ನೀ ಮಾಡಿದ್ದಿದೇ. ನಿಂಗೆ ಈ ಅರಮನೆ ಚಾಕ್ರಿ ಹ್ಯಾಗೆ ಸಿಕ್ತು"?

"ಯಾಕಾ. ನಿಂಗದರಮೇಲೆ ಕಣ್ಬಿತ್ತೇನು"?

"ಹೋಗೋ ನಿನ್ನ ಚಾಕರಿ ಯಾವೋನಿಗ್ಬೇಕು. ನಮ್ಮಯ್ಯನೋರು ನನ್ನ ಮನೇ ಮಕ್ಕಳಂಗೆ ಸಾಕ್ತಾರೆ. ನಿಮ್ಮನ್ನ ಸತ್ಯಾ ಬದ್ಕಿದ್ಯಾ ಎಂತ ಕೇಳೋರೇ ಇಲ್ಲಾ. ನೀವೆಲ್ಲಾ ತಬ್ಬಲಿಗಳು".

ಸ್ವಾರಸ್ಯವಾಗಿದ್ದ ಭಾಗ ಮುಗಿಯಿತೆಂದುಕೊಳ್ಳುತ್ತಾ, ಶ್ರೀಕಂಠಯ್ಯನು ಸದ್ದುಮಾಡದೆ ಬಾಗಿಲಬಳಿಯಿಂದ ಹೊರಟು ಕೃಷ್ಣಭಟ್ಟರ ಮನೆಯ ಕಡೆಗೆ ಹೊರಟನು. ಬಾಗಿಲ ಬಳಿಗೆ ಹೋಗುವಾಗ ಎಲ್ಲೆಲ್ಲಿ ಏನೇನು ಹೇಳಬೇಕು ಏನೇನು ಮಾಡಬೇಕೆಂಬುದೆಲ್ಲಾ ಆತನ ಮನಸ್ಸಿನಲ್ಲಿ ನಿಶ್ಚಯ ವಾಗಿತ್ತು. ಈಗ ಎಲ್ಲಾ ಬದಲಾಯಿಸಬೇಕಾಯಿತು. ಗುರುಗಳಲ್ಲಿ ಹೋದಾಗ ತಪ್ಪು ಯಾರಮೇಲೆ ಹಾಕಬೇಕು ಎಂಬ ಹೊಸ ಸಮಸ್ಯೆ ಈಗ ಮನಸ್ಸನ್ನಾವರಿಸಿತು. ಸಿದ್ದನ ಮನೆಗೂ ಭಟ್ಟರ ಮನೆಗೂ ಇದ್ದ ದಾರಿ ಸವೆಯುವ ಹೊತ್ತಿಗೆ ನಡೆದ ಸಂಗತಿಗಳನ್ನು ಇದ್ದಂತೆ ತಿಳಿಸುವುದೇ ಸುಲಭವೂ ಸೂಕ್ತವೂ ಎಂದು ಕಂಡುಬಂದಿತು. ಶ್ರೀಕಂಠಯ್ಯನು ಬಾಗಿಲ ಸಮೀಪಕ್ಕೆ ಬರುತ್ತಲೇ ಜಗುಲಿಯಮೇಲೆ ನಿಂತಿದ್ದ ಭಟ್ಟರು ಕತ್ತಲೆಯಲ್ಲಿ ಗುರುತು ಹಿಡಿಯದೆ "ಯಾರದು?" ಎಂದರು.

"ನಾನು ಗುರುಗಳೇ".

"ಏನು ಕಂಠೀ! ಇಷ್ಟು ಹೊತ್ತಿನಲ್ಲಿ ಬಂದೆ. ಮನೆಯಲ್ಲಿ ಎಲ್ಲಾ ಆರೋಗ್ಯವೇ"?

"ತಮ್ಮ ಆಶೀರ್ವಾದದಿಂದ ಎಲ್ಲಾ ಆರೋಗ್ಯ. ಹಿಂದೆ ತಮ್ಮ ದರ್ಶನ ಮಾಡಿದ ಸಂದರ್ಭದಲ್ಲಿ ಒಂದು ವಿಷಯ ಪ್ರಸ್ತಾಪಿಸಿದ್ದೆ. ಅದರ ವಿಚಾರವಾಗಿ ಬಂದೆ".

"ಏನು? ನನಗೆ ವಿಚಾರ ಮರೆತು ಹೋಗಿದೆ".

"ಗ್ರಂಥಸ್ಪರ್ಧೆಯ ವಿಷಯ".

"ಓಹೋ! ಈಗ ಜ್ಞಾಪಕವಾಯಿತು. ನಾನು ಗ್ರಂಥವನ್ನು ಖಂಡಿತ ಕಳುಹಿಸಬೇಕೆಂದು ನೀನು ಹೇಳಿದ್ದೆಯಲ್ಲವೇ? ನಾನೂ ಗ್ರಂಥವನ್ನು ಕಳುಹಿಸಿರುವೆನಲ್ಲ".

"ಆ ವಿಚಾರ ಗೊತ್ತಾಯಿತು. ಅದಕ್ಕೇ ಬಂದೆ".

"ಏಕೆ, ಬಹುಮಾನ ಯಾರಿಗೆ ಎಂಬುದು ಗೊತ್ತಾಯಿತೇ"?

"ಗೊತ್ತಾದಹಾಗೆಯೇ, ಆ ದಿನ ನಾನು ಯಾವುದೋ ಒಂದು ಭರವಸೆಯನ್ನು ಇಟ್ಟುಕೊಂಡು ತಮ್ಮನ್ನು ಗ್ರಂಥ ಕಳುಹಿಸಬೇಕೆಂದು ಒತ್ತಾಯ ಮಾಡಿದೆ. ನಾನು ಮಾಡುವ ಪ್ರಯತ್ನಗಳೆಲ್ಲವನ್ನು ಮಾಡಿದರೂ ಕೊನೆಗೆ ವಿಫಲವಾಯಿತು" ಎಂದು ತಲೆ ತಗ್ಗಿಸಿಕೊಂಡು ನಿಂತುಕೊಂಡನು.

"ಕಂಠೀ, ನಿನ್ನ ಮಾತು ನನಗೆ ಸರಿಯಾಗಿ ಅರ್ಥವಾಗಲಿಲ್ಲ. ಬಾ, ಒಳಗೆ ಕುಳಿತುಕೊಂಡು ಸರಿಯಾಗಿ ಹೇಳು" ಎಂದು ಅವನನ್ನು ಕರೆದುಕೊಂಡು ಒಳಕ್ಕೆ ಹೋದರು.

ಶ್ರೀಕಂಠಯ್ಯನು ಸ್ವಲ್ಪ ಸ್ವಲ್ಪವಾಗಿ ತಾನು ಮಾಡಿದ ಪ್ರಯತ್ನ ಅದರ ಫಲ. ತಾನು ಸ್ವಲ್ಪ ಮುಂಚೆ ಸಿದ್ದನ ಮನೆಯ ಬಾಗಿಲ ಬಳಿ

ಕೇಳಿದ ಸಂಭಾಷಣೆಯ ಸಾರಾಂಶ ಎಲ್ಲವನ್ನೂ ತಿಳಿಸಿದನು. ಅನಂತರ ಭಟ್ಟರು "ನೀನು ಮಾಡಬಾರದ ಕೆಲಸವನ್ನು ಮಾಡಲು ಪ್ರಯತ್ನಪಟ್ಟೆ. ಅಂಥಾ ಕೆಲಸಗಳಿಗೆ ದೈವಬಲವಿರುವುದಿಲ್ಲ. ಅದು ಕೈಗೂಡದಿದ್ದುದನ್ನು ಕೇಳಿ ನನಗೆ ಸಂತೋಷವಾಯಿತು. ದೇವರು ಸೋಮಣ್ಣನ ಮರ್ಯಾದೆ ಯನ್ನು ಕಾಪಾಡಿದ್ದಾನೆ. ನಿನ್ನ ಪ್ರಯತ್ನ ಸಫಲವಾಗಿದ್ದರೆ ಮಹಾರಾಜ ರಿಗೆ ಮುಖವನ್ನು ತೋರಿಸುವುದು ಸೋಮಣ್ಣನಿಗೆ ಕಷ್ಟವಾಗುತಿತ್ತು. ಈಗ ಆಗಿರುವುದೇ ಸರಿಯಾದದ್ದು".

"ಆದರೆ ಗುರುಗಳೇ, ಶರ್ಮರಿಗೆ ಸ್ಪರ್ಧೆಯ ವಿಚಾರ ಗೊತ್ತಾಗದ್ದು ಹೇಗೆ? ಅವರಿಗೆ ಕಾಗದ ಸಿಕ್ಕಿಲ್ಲವೆಂಬುದು ಖಂಡಿತ".

"ಬಹುಶಃ ಬೇರೆ ಕಾಗದ ಯಾವುದನ್ನೋ ಹುಡುಕುವ ಉದ್ದೇಶದಿಂದ ಹಳೆಯ ಕಾಗದದ ಕಟ್ಟನ್ನು ನೋಡುತಿದ್ದಾಗ ಒಡೆಯದೇ ಇದ್ದ ಲಕ್ಕೋಟೆ ಸಿಕ್ಕಿರಬಹುದು. ಇದೇನೆಂದು ಒಡೆದು ನೋಡಿರಬಹುದು ವಿದ್ಯಾಖನಿ ಯಾದ ಸೋಮಣ್ಣನಿಗೆ ಗ್ರಂಥರಚನೆಗೆ ಹೆಚ್ಚಿಗೆ ಕಾಲ ಬೇಕಿಲ್ಲ. ಆದುದ ರಿಂದ ಒಂದೆರಡು ದಿನಗಳ ಅವಕಾಶ ಸಿಕ್ಕಿದರೂ ಸಾಕು. ಗ್ರಂಥ ಬಂದಿದೆ. ಇದರಲ್ಲಿ ಆಶ್ಚರ್ಯವೇನು?"

"ಹೌದು ಗುರುಗಳೇ! ಇದು ನನ್ನ ಅಲ್ಪ ಬುದ್ಧಿಗೆ ಹೊಳೆಯಲಿಲ್ಲ. ಈ ವಿಚಾರದಲ್ಲಿ ನಾನು ಪ್ರವೇಶಿಸಿದ್ದು ತಪ್ಪು. ಕ್ಷಮಾಪಣೆ ಬೇಡುತ್ತೇನೆ".

"ಆಗುವುದೆಲ್ಲ ಒಳ್ಳೆಯದಕ್ಕೇ. ನೀನು ಹೀಗೆ ಪ್ರವೇಶಿಸಿದ್ದರಿಂದ ಪಾಪ, ಆ ಬಡವ ಸಿದ್ಧನಿಗೆ ನಿನ್ನ ಶಿಫಾರಿಸ್ಸಿನಿಂದ ಜೀವನಕ್ಕೆ ಮಾರ್ಗ ವಾಯಿತು. ಅದನ್ನು ಯೋಚಿಸಿದರೆ ನನಗೂ ಒಂದುತರದ ಸಂತೋಷವೇ".

"ತಮ್ಮ ಉದಾರತೆಗೆ ಕೊನೆಯಿಲ್ಲ. ಈ ಅಲ್ಪನಿಗೆ ಅದರ ಅಣು ಮಾತ್ರದಷ್ಟಾದರೂ ಸಿದ್ಧಿಸುವಂತೆ ಅನುಗ್ರಹಿಸಬೇಕು".

"ಬಹಳ ದೊಡ್ಡ ಮಾತನ್ನಾಡುತ್ತೀ ಕಂಠೀ. ಆಗಲಿ, ಈಗ ಹೋಗಿ ಬಾ. ಹೊತ್ತಾಯಿತು".

ಕಂಠಿಯು ಗುರುಗಳಿಗೆ ವಂದಿಸಿ ಅಷ್ಟು ಜಾಗರೂಕತೆಯಿಂದಲೂ ಮುಂಜಾಗರೂಕತೆಯಿಂಗಲೂ ಮಾಡಿಗ್ದ ಸಿದ್ಧತೆಯೆಲ್ಲ ಮಣ್ಣುಪಾಲಾದುದು ದೈವಲೀಲೆಯೆಂದೇ ಅಂದುಕೊಳ್ಳುತ್ತಾ ಮನೆಯಕಡೆ ಹೊರಟನು.

೧೩

ಮಕ್ಕಳ ನಡವಳಿಕೆ ಪಾಠಶಾಲೆಯಲ್ಲೇ ಒಂದುರೀತಿ. ಮನೆಯಲ್ಲೇ ಒಂದುರೀತಿ. ಮನೆಯಲ್ಲಿ ತಂದೆ, ತಾಯಿ, ಅಣ್ಣ, ತಮ್ಮ, ಅಕ್ಕ, ತಂಗಿಯರ ಮಧ್ಯದಲ್ಲಿ ಅವರ ವರ್ತನೆಯೇ ಒಂದು ತರಹ. ಶಾಲೆಯಲ್ಲೇ ಒಂದು ತರಹ. ಶಾಲೆಯ ವಾತಾವರಣದಲ್ಲಿ ಸಹಜತೆ ಕಡಿಮೆ. ಸಹಪಾಟಿಗಳು ಸ್ನೇಹಿತರೇನೋ ಅಹುದು. ಆದರೆ ಸಮೀಪ ಬಂಧುಗಳಲ್ಲ. ಉಪಾಧ್ಯಾಯರು ತಂದೆಗೆ ಸಮವೆಂದು ಶಾಸ್ತ್ರಗಳು ಹೇಳುತ್ತವೆ. ವಿದ್ಯಾರ್ಥಿಗಳೂ ತಂದೆಗೆ ಸಲ್ಲಿಸುವ ಗೌರವಕ್ಕಿಂತಲೂ ಹೆಚ್ಚು ಗೌರವವನ್ನು ಗುರುಗಳಿಗೆ ತೋರಿಸಬಹುದು. ಆದರೆ ತಂದೆಯಲ್ಲಿರುವ ಸಲಿಗೆ ಅಪೂರ್ವ. ಗುರುಗಳಿಗೂ ಅಷ್ಟೇ. ಶಿಷ್ಯನು ಪುತ್ರ ಸಮಾನ—ಶಾಸ್ತ್ರಾಧಾರದ ರೀತ್ಯಾ. ಪೂರ್ವಕಾಲದ ಗುರುಕುಲವಾಸದ ಏರ್ಪಾಡಿನಲ್ಲಿ ಶಿಷ್ಯನೂ ಪುತ್ರನೂ ಗುರುವಿಗೆ ಒಂದೇ ಆಗಿದ್ದು ಶಿಷ್ಯನೇ ಪುತ್ರನಿಗಿಂತಲೂ ಕೆಲವು ಸಮಯಗಳಲ್ಲಿ ಪ್ರಿಯನಾಗಿದ್ದಿರಬಹುದು. ಈಗ ಶಾಲೆಯ ಕಾಲಗಳಲ್ಲಿ ಹೊರತು ಉಳಿದ ಕಾಲಗಳಲ್ಲಿ ಗುರುಶಿಷ್ಯರಿಗೆ ಮುಖಸಂದರ್ಶನವಾಗುವುದೇ ಅಪೂರ್ವ. ಶಾಲೆಯ ವೇಳೆಯಲ್ಲಿಕೂಡ ನೂರಾರು ವಿದ್ಯಾರ್ಥಿಗಳಿರುವಾಗ ಎಲ್ಲರ ವಿಚಾರವನ್ನೂ ಕೂಲಂಕಷವಾಗಿ ತಿಳಿಗುಕೊಳ್ಳುವುದೂ ಉಪಾಧ್ಯಾಯರಿಗೆ ಸಾಹಸದ ಮಾತಾಗಿರುತ್ತದೆ. ಹಳ್ಳಿಯ ಶಾಲೆಯು ಚಿಕ್ಕದಾಗಿದ್ದು ಬರುವ ಮಕ್ಕಳ ಸಂಖ್ಯೆ ಅಷ್ಟೇನೂ ಹೆಚ್ಚಿಲ್ಲದಿದ್ದರೂ ಶಿವರಾಮಯ್ಯನವರು ಒಬ್ಬರೇ ಉಪಾಧ್ಯಾಯರಾಗಿದ್ದುದರಿಂದ ಮಕ್ಕಳೆಲ್ಲರೂ ಅಯ್ಯನವರನ್ನು ಪ್ರೀತಿಸಿ ಗೌರವಿಸುತ್ತಿದ್ದರೂ ಶಿವರಾಮಯ್ಯನವರಿಗೆ ಮಕ್ಕಳಮೇಲೆ ಸ್ವಾಭಾವಿಕವಾದ ಪ್ರೀತಿಯಿದ್ದರೂ ನಿಕಟಬಾಂಧವ್ಯದ ಸಲಿಗೆಯ ಅನುಭವ ಶಿವರಾಮಯ್ಯನವರಿಗೆ ಉಂಟಾಗಿರಲಿಲ್ಲ.

ವಿಜಯಪುರದಲ್ಲಿ ಒಂದು ಹೊಸ ಅನುಭವವು ಇವರ ಪಾಲಿಗೆ ಬಂದಿತು. ಅದು ರಾಮಸ್ವಾಮಿಯ ಮಗ ಶಿವಣ್ಣನ ಸ್ನೇಹ. ಬಂದ ಒಂದೆರಡು ದಿನ ಮುದ್ದುಮಗುವಿನ ಮನಮೋಹಕ ಮಾತುಗಳನ್ನು ಶಿವರಾಮಯ್ಯನವರು ಕೇಳಿ; ಮೆಚ್ಚಿ ಅದನ್ನು ಹೊಗಳಿ, ಆಡುವ ಎರಡು ಮಾತುಗಳನ್ನು ಕೇಳಿ; ತನ್ಮೂಲಕ ತಮ್ಮ ಮನಸ್ಸಂತೋಷಪಡಿಸಿಕೊಳ್ಳುವ ಆಕಾಂಕ್ಷೆಯಿಂದ ಗೌರಮ್ಮನವರೂ ಸರಸ್ವತಮ್ಮನವರೂ ತಮ್ಮ ಮಗುವನ್ನು ಒಂದಲ್ಲ ಒಂದು ಕಾರಣದಿಂದ ಇವರ ಬಳಿಗೆ ಕಳುಹಿಸುತ್ತಿದ್ದರು. ಘಮಘಮಿಸುವ ಹೊಸ ಹೂವನ್ನೂ ಅರಳುಗಣ್ಣಿನ ನಗೆಮೊಗದ ಹಾಲುಗಲ್ಲದ ಮಕ್ಕಳನ್ನೂ ಕೈಗೆ ತೆಗೆದುಕೊಂಡು ಕ್ಷಣಕಾಲವಾದರೂ ಆನಂದಿಸಬೇಕೆಂಬ ಆಸೆಯನ್ನು ತಡೆಯ ಬಲ್ಲ ವಿರಕ್ತರು ವಿರಳ. ಈ ಚಿಕ್ಕಗುಂಪಿಗೆ ಶಿವರಾಮಯ್ಯನವರು ಸೇರಿದವ ರಾಗಿರಲಿಲ್ಲ. ಮಗು ತಾನಾಗಿ ತಮ್ಮ ಬಳಿಗೆ ಬರುವಂತೆ ಮಾಡುವ ಉಪಾಯಗಳನ್ನು ಯೋಚಿಸಲಾರಂಭಿಸಿದರು. ಪೇಟೆಯಕಡೆ ಹೋಗಿ ಮನೆಗೆ ಬಂದಾಗ ಅಂಗಿಯ ಜೇಬಿನಲ್ಲಿ ದ್ರಾಕ್ಷಿ, ಉತ್ತುತ್ತೆ, ಕಲ್ಲುಸಕ್ಕರೆ ಈ ಪದಾರ್ಥಗಳಲ್ಲಿ ಒಂದಲ್ಲ ಒಂದು ಇರುತ್ತಿತ್ತು. ತಿಂಡಿ ಇರುವಕಡೆ, ಅದರಲ್ಲೂ ಸಿಹಿತಿಂಡಿ ಇರುವಕಡೆ ಮಕ್ಕಳು ಬರುವುದು ಹೆಚ್ಚೇ? ಯಾರ ಪ್ರೇರಣೆಯೂ ಇಲ್ಲದೆ ಯಾರ ಆಹ್ವಾನವೂ ಇಲ್ಲದೆ, ದೊಡ್ಡ ಶಿವಣ್ಣನು ಬರುತ್ತಲೇ ಚಿಕ್ಕ ಶಿವಣ್ಣನು ಓಡಿಬರುವುದು ಪ್ರಾರಂಭವಾಯಿತು. ಜೇಬು ಗಳ ಲೂಟಿಯೂ ಸಾಧಾರಣವಾಯಿತು. ತಾಯಿ ಅಜ್ಜಿಯರು ಬೇಡವೆಂದು ಎಷ್ಟು ನಿಷೇಧಿಸಿದರೂ ತರುವುದೂ ನಿಲ್ಲಲಿಲ್ಲ ತೆಗೆದುಕೊಳ್ಳುವುದೂ ನಿಲ್ಲಲಿಲ್ಲ. ಪ್ರಾಯಶಃ ಈ ನಿಷೇಧವು ತುಟಿಯಿಂದ ಹೊರಗಿನದೆಂದೂ ಹೃದಯದ ಅಂತರಾಳದಲ್ಲಿ ಇದು ಒಂದುತರಹ ಆನಂದವನ್ನೇ ಉಂಟುಮಾಡುತ್ತಿತ್ತೆಂದೂ ಅಪರಾಧಿಗಳಿಬ್ಬರೂ ತಿಳಿದಿದ್ದರೋ ಏನೋ?

ಇಬ್ಬರ ಸ್ನೇಹ ದಿನದಿನಕ್ಕೆ ಹೆಚ್ಚಿತು. ಮಗು ಮಲಗುವುದೂ ದೊಡ್ಡಪ್ಪನ ಹತ್ತಿರ. ಮುಖ ತೊಳೆಸುವುದು, ಸ್ನಾನ ಮಾಡಿಸುವುದು, ಕೊಳೆಬಟ್ಟೆಗಳನ್ನು ತೆಗೆದು ಒಗೆದ ಬಟ್ಟೆಗಳನ್ನು ತೊಡಿಸುವುದು, ಊಟಕ್ಕೆ ಜೊತೆಯಲ್ಲಿ ಕುಳಿತುಕೊಳ್ಳುವುದು, ಎಂಜಲ ಕೈ ತೊಳೆಸುವುದು ಈ ಎಲ್ಲ

ಸೇವೆಗಳೂ ಶಿವರಾಮಯ್ಯನವರ ಪಾಲಿಗೇ ಮುಡುಪಾಗಿ ಬಿಟ್ಟವು. ಅವರು ಮನಸ್ಸಿನಲ್ಲಿ ಬೇಜಾರುಪಟ್ಟುಕೊಳ್ಳಬಹುದೆಂದು ಮಗುವಿನ ಈ ಅಭ್ಯಾಸವನ್ನು ಬಿಡಿಸಲು ಮನೆಯವರೆಲ್ಲರೂ ಪ್ರಯತ್ನಮಾಡಿದರು. ಆಗರೆ ಬಂದ ಪ್ರತಿಫಲ ಮಗುವಿನ ಕಣ್ಣೀರು. ಈ ಪ್ರಯತ್ನಗಳ ಅರಿವು ಶಿವರಾಮಯ್ಯನವರಿಗೆ ಉಂಟಾಗಿ ಅವರು "ಏಕೆ, ಮಗು ನನಗೆ ತೊಂದರೆಕೊಡುವುದೆಂದು ಭಾವಿಸಿದಿರಾ? ನಾನು ವಿಜಯಪುರಕ್ಕೆ ಬಂದದ್ದರಿಂದ ಈ ಹೊಂದು ಹೊಸ ಸುಖಾನುಭವವಾಗುತ್ತಿದೆ. ಅದನ್ನು ನೀವು ತಪ್ಪಿಸಿದರೆ ನನಗೆ ಊರಕಡೆ ಯೋಚನೆ ಹುಟ್ಟುವಂತೆ ಮಾಡುತ್ತೀರಿ" ಎಂದು ಸ್ವಲ್ಪ ಅಸಮಾಧಾನದ ಧ್ವನಿಯಲ್ಲಿ ಹೇಳಲು ಎಲ್ಲರೂ ಸುಮ್ಮನಾಗಬೇಕಾಯಿತು.

ಸೋಮಶರ್ಮರು ಗೊತ್ತುಮಾಡಿದ್ದ ಗಡುವಿನ ಕಾಲವು ಮುಗಿಯುತ್ತ ಬಂದಂತೆಲ್ಲ ಮಗುವನ್ನು ಬಿಟ್ಟು ಹೊರಡುವ ಸಮಯ ಸನ್ನಿಹಿತವಾಯಿತೆಂದು ಶಿವರಾಮಯ್ಯನವರ ಮನಸ್ಸಿನಲ್ಲಿ ಅಸಮಾಧಾನ ಮೂಡಲು ಪ್ರಾರಂಭವಾಯಿತು. ಹೆಚ್ಚುಹೊತ್ತು ಬಾಲಕನ ಸಹವಾಸದಲ್ಲೇ ಕಳೆಯಲು ಆರಂಭಿಸಿದರು. ಮೊದಮೊದಲು ನಂಜಪ್ಪನವರೊಡನೆ ಪ್ರತಿ ಬೆಳಿಗ್ಗೆ ಸಾಯಂಕಾಲ ಹೊರಗೆ ಹೋಗಿ ಸುತ್ತಾಡಿಕೊಂಡು ಬರುತ್ತಿದ್ದರು. ಮೊದಲು ಬೆಳಗಿನ ಸರದಿಗೆ ತಪ್ಪಿಸಿಕೊಂಡರು. ಈಚೆಗೆ ಸಾಯಂಕಾಲದ ಹೊತ್ತು ಕೂಡ ಮಗುವಿನೊಡನೆಯೇ ಕಾಲಕಳೆಯಲು ಪ್ರಾರಂಭಿಸಿದರು. ಅನುಭವಿಗಳಾದ ನಂಜಪ್ಪನವರೂ ಮನಸ್ಸಿನಲ್ಲಿಯೇ ಮರುಕಪಟ್ಟುಕೊಂಡು ಕರೆಯುವುದನ್ನುಕೂಡ ಬಿಟ್ಟುಬಿಟ್ಟರು.

ಗಡುವಿನ ಕೊನೆಯ ದಿವಸವೆಲ್ಲಾ ಶಿವರಾಮಯ್ಯನವರ ಮನಸ್ಸು ಸ್ತಿಮಿತದಲ್ಲಿರಲಿಲ್ಲ. ಮೊದಲನೆಯ ಯೋಚನೆ ಗ್ರಂಥಪರಿಶೀಲನೆಯ ಫಲ ಏನಾಗಿದೆಯೋ ಎಂಬುದು. ವರ್ಷದ ಪ್ರಾರಂಭದಿಂದಲೂ ಮನಸ್ಸಿಟ್ಟು ಓದುತ್ತಿದ್ದು ಪರೀಕ್ಷೆಯಲ್ಲಿ ಚನ್ನಾಗಿಯೇ ಉತ್ತರಗಳನ್ನು ಬರೆದುಬಂದ ಬುದ್ಧಿವಂತ ವಿದ್ಯಾರ್ಥಿಯ ಮನಸ್ಸು ಫಲಿತಾಂಶ ಹೊರಬೀಳುವ ದಿನ ಇರುವಂತೆ ಅವರ ಮನಸ್ಸು ಇದ್ದಿತು. ನೂರಕ್ಕೆ ತೊಂಬತ್ತೊಂಬತ್ತು ಪಾಲು ಉತ್ತಮದರ್ಜೆಯಲ್ಲೇ ತೀರ್ಮಾನವಾಗಬೇಕು. ಆದರೆ ಆ ಒಂದು

ಪಾಲು ಇದೆಯಲ್ಲ, ಮಾನವನ ಪ್ರಯತ್ನಕ್ಕೆ ಮೀರಿದ ದೈವಾಲೋಚನೆ. ಅದೇನಾದರೂ ವಿರುದ್ಧವಾದರೆ ಯೋಚಿಸಿದಂತೆಲ್ಲಾ ಹೃದಯವನ್ನು ಒಂದು ತರಹ ಹೆದರಿಕೆ ಆವರಿಸುವುದು. ಏತಕ್ಕೆ ಈ ಹೆದರಿಕೆ ಎಂದು ಹೇಳಲು ಸಾಧ್ಯವಿಲ್ಲ. ವಿಫಲವಾದರೂ ಏನು ಮಾಡಲು ಸಾಧ್ಯವಿಲ್ಲವೆಂಗೂ ಅದರಿಂದ ಮಹತ್ತರ ನಷ್ಟವಿಲ್ಲವೆಂದೂ ಗೊತ್ತು. ಆದರೂ ಆ ಅಧೀರತೆ ಯನ್ನು ಮನಸ್ಸಿನಿಂದ ಹೊಡೆವಟ್ಟಲು ಅಸಾಧ್ಯ. ಟಾನಸ್ಲೇಯವರ ಮನೆಯಿಂದ ಕರೆ ಬರಬಹುದೆಂದು ಕ್ಷಣ ಕ್ಷಣವೂ ನಿರೀಕ್ಷಣೆ. ತಾವೇ ಹೋಗಿ ಬರೋಣವೇ ಎಂದು ಒಂದೆರಡು ಸಲ ಆಲೋಚಿಸಿದರು. ಆದರೆ ಗ್ರಂಥವು ತಿರಸ್ಕರಿಸಲ್ಪಟ್ಟಿದ್ದರೆ ? ಅದನ್ನು ಟಾನಸ್ಲೇಯವರ ಬಾಯಿಂದ ಹೇಗೆ ಕಿವಿಯಾರ ಕೇಳುವುದು. ಬರುವ ಅನಿಷ್ಟ ಎಂದಿದ್ದರೂ ಬರುತ್ತದೆ. ನಾವಾಗಿ ಹೋಗಿ ಅದೇಕೆ ಅದನ್ನು ಮುಂಚೆಯೇ ಪರಿಚಯ ಮಾಡಿ ಕೊಳ್ಳಬೇಕು. ಇದೆಲ್ಲದರ ಫಲವಾಗಿ ಟಾನಸ್ಲೇಯವರ ಮನೆಗೆ ಹೋಗುವ ಆಲೋಚನೆಯನ್ನೇ ಬಿಟ್ಟಿದ್ದಲ್ಲದೆ ಅಲ್ಲಿಂದ ವರ್ತಮಾನ ಬರುವವರೆಗೂ ಮನೇಬಿಟ್ಟು ಹೊರಡುವ ಯೋಚನೆಯನ್ನೇ ಬಿಟ್ಟರು.

ಎರಡನೆಯದು ಬರಿಯ ಹೆದರಿಕೆಯಲ್ಲ ; ಅನುಮಾನವಲ್ಲ ; ನಿರ್ದಿಷ್ಟ ವಾದದು. ಫಲಿತಾಂಶವು ಏನೇ ಇರಲಿ, ಇನ್ನೆರಡು ಮೂರು ದಿನಗಳಲ್ಲಿ ವಿಜಯಪುರವನ್ನು ಬಿಡಬೇಕು. ಅಂದರೆ ಚಿಕ್ಕಶಿವಣ್ಣನನ್ನು ಅಗಲಬೇಕು ಶಿಶುವ್ಯಾಮೋಹವೆಂಗರೆ ಏನೆಂಬುದರ ಅರಿವು ಅವರಿಗೆ ಈ ಕೆಲವು ದಿನ ಗಳಲ್ಲಿ ಬಹಳ ಚೆನ್ನಾಗಿ ಆಗಿದ್ದಿತು. ಲಕ್ಷ್ಮೀದೇವಮ್ಮನವರು ಮಕ್ಕಳಿಲ್ಲ ವೆಂದು ಹಿಂದೆ ಕೊರಗುತ್ತಿದ್ದಾಗ ಈಕೆ ಏಕೆ ಇಷ್ಟು ವ್ಯಥೆಪಡುವಳೆಂದು ಆಶ್ಚರ್ಯಪಡುತ್ತಿದ್ದರು. ಬಹುಶಃ ನೆರೆಯವರೆಲ್ಲರಿಗೂ ಇರುವ ಒಂದು ವಸ್ತುವು ತನಗಿಲ್ಲವೆಂಬ ಅಸಹನೆ ಈಕೆಗೆ ಉಂಟಾಗಿದೆ ಎಂದು ಅವರು ಮನಸ್ಸಿನಲ್ಲಿ ಅನೇಕ ಸಲ ಯೋಚಿಸಿದ್ದರು. ಹಸಿವು ಬಾಯಾರಿಕೆಗಳಂತೆ ಮಕ್ಕಳ ಕಾಂಕ್ಷೆಯೂ ಮಾನವ ಸಹಜವಾದದ್ದೆಂದು ಅವರ ಭಾವನೆಗೆ ಬಂದಿರಲಿಲ್ಲ. ಗಂಡಸರಿಗಿಂತ ಹೆಂಗಸರಿಗೆ ಈ ಗೀಳು ಹೆಚ್ಚಾಗಿರಬಹುದು. ಬೇಗ ಅವರ ಮನಸ್ಸಿಗೆ ಭಾಸವಾಗಬಹುದು. ಇಲ್ಲವೇ ಇತರ ಕಾರ್ಯಗಳಲ್ಲಿ ಮಗ್ನರಾಗಿ

ಆ ಕಾರ್ಯವೇ ಮನಸ್ಸನ್ನೆಲ್ಲಾ ಪೂರ್ಣವಾಗಿ ಆವರಿಸಿ ಈ ಭಾವನೆ ಪ್ರಬಲ ವಾಗಲು ಎಡೆಗೊಡದಿರಬಹುದು. ಆದರೆ ಅದು ಒಂದಲ್ಲೊಂದು ಸಲ ಗಂಡಸರ ಮನಸ್ಸಿನಲ್ಲಿಯೂ ಉಂಟಾಗಿಯೇ ಆಗುವುದು. ಮಕ್ಕಳನ್ನು ಸಾಕುವಾಗ ಅನುಭವಿಸಬೇಕಾದ ಕಷ್ಟ, ಅವರ ವಿದ್ಯಾಭ್ಯಾಸದ ಭಾರ, ಹೆಣ್ಣುಮಕ್ಕಳಿಗೆ ಸರಿಯಾದ ವರನನ್ನು ಹುಡುಕುವುದು, ಗಂಡು ಮಕ್ಕಳಿಗೆ ಕೆಲವುಸಲ ಅಳಿಯಂದಿರಿಗೂ ಈ ಪೈಪೋಟಿ ಪ್ರಪಂಚದಲ್ಲಿ ಜೀವನ ನಡೆಸುವ ಮಾರ್ಗ ತೋರಿಸುವುದು, ಅವರು ಗುಣ ವಿಹೀನರಾದರೆ, ಅಲ್ಪಾಯುಷ್ಯ ರಾದರೆ ಮನಸ್ಸಿಗೆ ಆಗುವ ವ್ಯಥೆ, ಎಲ್ಲವನ್ನೂ ಬಣ್ಣಿಸಿ ದೃಷ್ಟಾಂತರಗಳೊಡನೆ ಕೊಟ್ಟ ದೊಡ್ಡ ದೊಡ್ಡ ಉಪನ್ಯಾಸಗಳೆಲ್ಲವೂ ಪತ್ನಿಯ ಮನಸ್ಸಿನ ಮೇಲೆ ಅಪೇಕ್ಷಿಸಿಗಂತಹ ಪರಿಣಾಮವನ್ನು ಮಾಡದಿದ್ದುದಕ್ಕೆ ಕಾರಣ, ಶಿವ ರಾಮಯ್ಯನವರಿಗೆ ಈಗ ಗೊತ್ತಾಯಿತು. ತಮ್ಮ ಗ್ರಂಥಗಳಿಂದ ಯಶಸ್ಸು ಬರಬಹುದು, ಹೆಸರು ಚಿರಸ್ಥಾಯಿಯಾಗಬಹುದು. ಆದರೆ ಸಂತಾನಾ ಪೇಕ್ಷೆಯು ತಮ್ಮ ಹೆಸರು ಹೇಳುವವರನ್ನು ಪ್ರಪಂಚದಲ್ಲಿ ಬಿಟ್ಟು ಹೋಗ ಬೇಕೆಂಬ ಒಣ ಪ್ರತಿಷ್ಠೆಯ, ಇಲ್ಲವೇ ಆಸ್ತಿಗೆ ಹಕ್ಕುದಾರರಿಲ್ಲದೇ ಹೋಗುವ ರೆಂಬ ಲೋಭಿತನದ ಶಿಶುವಲ್ಲ. ಅದು ಅನಿರ್ವಚನೀಯವಾದ, ತರ್ಕಾ ತೀತವಾದ ಆಕಾಂಕ್ಷೆ. ಹಾಗಿಲ್ಲದಿದ್ದರೆ ಸ್ವಸುಖಸಾಧನೆಯಲ್ಲಿ ಹೊರಗಿನ ಪ್ರಪಂಚದ ಸರ್ವ ಜೀವಿಗಳನ್ನೂ ತನ್ನ ತಂದೆ, ತಾಯಿ, ಅಣ್ಣ, ತಮ್ಮ ಮೊದಲಾದ ಆತ್ಮೀಯರನ್ನೂ ಕೂಡ ತೃಣೀಕರಿಸಿ ಅವಶ್ಯ ಕಂಡುಬಂದಲ್ಲಿ ಅವರು ತನ್ನ ಸೌಖ್ಯಪಥದಲ್ಲಿ ಕಂಟಕರೆಂದು ಕಂಡುಬಂದರೆ ಸೊಳ್ಳೆ ತಿಗಣೆ ಗಳನ್ನು ಹೊಸಕಿಹಾಕುವಂತೆ ಹೊಸಕಿಹಾಕಲೂ ಸಿದ್ಧನಾಗಿರುವ ಮಾನವನು ಸರ್ವಸ್ವವನ್ನೂ—ತನ್ನ ಮಕ್ಕಳ ಜೀವನವನ್ನು ಸುಖಮಯವನ್ನಾಗಿ ಮಾಡಲು—ಉಪಯೋಗಿಸಲು ಸಿದ್ಧನಾಗುತ್ತಿದ್ದನೇ? ಬಡತನದ ಬಂಧನ ದಲ್ಲಿ ಸಿಕ್ಕಿ ಹಗಲೂ ರಾತ್ರಿ ದುಡಿದು ಬಂದ ಸಂಪಾದನೆ ಸಾಲದೆ ಹೋದಾಗ ತಾವು ಒಪ್ಪತ್ತು ಊಟಮಾಡಿ ಮಕ್ಕಳಿಗೆ ಎರಡು ಹೊತ್ತೂ ಹೊಟ್ಟೆಗೆ ಹಾಕುತ್ತಿದ್ದರೇ? ಪ್ರಾಯಶಃ ಸೃಷ್ಟಿಕರ್ತನು ತನ್ನ ಸೃಷ್ಟಿಯು ಕೊನೆಗಾಣದಿರಲೆಂದು ಈ ಪವಿತ್ರ ಭಾವನೆಯನ್ನು ಎಲ್ಲ ಮಾನವರ ಹೃದಯದಲ್ಲೂ ಅಡಗಿಸಿಟ್ಟನೇನೋ?

೧೪

ಗಡುವು ತೀರಿದ ದಿವಸ ನಂಜಪ್ಪನವರ ಮನಸ್ಸಿನ ಆತಂಕ ಬಹಳ. ಗ್ರಂಥವಿಮರ್ಶೆಯ ಫಲಿತಾಂಶದಲ್ಲಿ ಅವರಿಗೆ ಎಳ್ಳಷ್ಟೂ ಸಂದೇಹವಿರಲಿಲ್ಲ. ತಮ್ಮ ಶಿವು ಬರೆದ ಪುಸ್ತಕ ಚೆನ್ನಾಗಿಯೇ ಇರಬೇಕು. ಇವನು ಏಕೆ ಟಾನಸ್ಲೇಯವರ ಮನೆಗೆ ಹೋಗಿ ಸಂತೋಷವರ್ತಮಾನವನ್ನು ತರುವ ಪ್ರಯತ್ನ ಮಾಡುತ್ತಿಲ್ಲ, ಎಂದು ಅವರಿಗೆ ಯೋಚನೆ. ಹೋಗಿ ಜ್ಞಾಪಿಸೋಣವೇ? ಎಂದು ಒಂದೆರಡು ಸಲ ಅಂದುಕೊಂಡರು. ಆದರೆ ಶಿವು ಅದಕ್ಕೆ ಬೇರೆ ಅರ್ಥಮಾಡಿ ಬಂದ ಕೆಲಸ ಬೇಗ ಮುಗಿಸಿಕೊಂಡು ಊರಿಗೆ ಹೊರಡಲು ಸೂಚನೆ ಎಂದುಕೊಂಡಾನು ಎಂಬ ಹೆದರಿಕೆಯಿಂದ ಸುಮ್ಮನಾದರು. ಗುರುವಾರ ರಾತ್ರಿಯೆಲ್ಲಾ ಅವರಿಗೆ ಇದೇ ಯೋಚನೆ. ಬಹಳ ಹೊತ್ತು ನಿದ್ದೆ ಬರಲಿಲ್ಲ. ಹೇಗಾದರೂ ಮಾಡಿ ಮಾರನೇ ಬೆಳಗ್ಗೆ ಶಿವಣ್ಣನನ್ನು ಜೊತೆಯಲ್ಲಿ ಕರೆದುಕೊಂಡು ಹೊರಗೆ ಹೋಗುವುದು, ಎಲ್ಲಿಗೋ ಹೋಗುವವರ ಹಾಗೆ ಹೋಗುತ್ತಾ ಟಾನಸ್ಲೇಯವರ ಬಂಗಲೆಯ ಮುಂದೆ ಹೋಗುವುದು. ಆಗ ಪಾದ್ರಿಗಳು ಅಲ್ಲಿ ಅಕಸ್ಮಾತ್ ಸಿಕ್ಕಲೇಬಹುದು. ಇಲ್ಲದಿದ್ದರೆ ಬಂಗಲೆಯ ಹತ್ತಿರ ಬಂದಮೇಲೆ ಅವರನ್ನು ನೋಡದೇ ಹೋಗುವುದು ಸರಿಯಲ್ಲ ಎಂಬ ನೆವದಿಂದ ಇಬ್ಬರೂ ಬಂಗಲೆಗೆ ಹೋಗುವುದು ಎಂದು ನಿರ್ಧರಿಸಿದರು. ಈ ಸಮರ್ಪಕವಾದ ಯೋಚನೆ ನಿಶ್ಚಯಿಸಿದ ಮೇಲೆ ಕಣ್ಣಿಗೆ ನಿದ್ರೆ ಹತ್ತಿತು.

ಶುಕ್ರವಾರ ಬೆಳಗ್ಗೆ ದೇವತಾರ್ಚನೆ ಮುಗಿಸಿಕೊಂಡು ಹೊರಗೆ ಹೊರಡಲು ಸಿದ್ಧರಾದರು. ಶಿವಣ್ಣನನ್ನು ಹುಡುಕಿದರು. ಅವರು ಮಗುವಿನೊಡನೆ ಹಿತ್ತಲಲ್ಲಿ ಆಡುತ್ತಿದ್ದರು. ಅಲ್ಲಿಗೇ ಹೋಗಿ "ಏನು ಶಿವು, 'ಹೊಸ ನೀರು ಬಂದು ಹಳೇ ನೀರನ್ನು ಹೊರಡಿಸಿದ' ಹಾಗೆ ಈ ಪೋರ, ನೀನು ನನ್ನ ಜೊತೆಯಲ್ಲಿ ಬರುವುದನ್ನು ಕಡಿಮೆ ಮಾಡಿಸಿದಾನೆ. ಎಲ್ಲಾದರೂ ಹೊರಗೆ ಸುತ್ತಾಡಿಕೊಂಡು ಬರೋಣ, ಬರುತ್ತೀಯಾ?"

"ಬರುತ್ತಿದ್ದೆ ಚಿಕ್ಕಪ್ಪ, ಆದರೆ ನನ್ನ ಮನಸ್ಸಿಗೆ ಏನೋ ಸಮಾಧಾನವಿಲ್ಲದ ಹಾಗೆ ಆಗಿದೆ"

"ಏಕೆ ದೇಹದಲ್ಲಿ ಹುಷಾರಿಲ್ಲವೇ?"

"ಹುಷಾರಿಲ್ಲದೇ ಏನು. ಏಕೆ ಹೀಗೆ ಬೇಜಾರೋ ಕಾರಣ ಗೊತ್ತಿಲ್ಲ".

"ಪುಸ್ತಕದ ವಿಚಾರದಲ್ಲಿ ಶರ್ಮರ ಅಭಿಪ್ರಾಯ ಏನೆಂದು ಬರುತ್ತದೋ ಎಂದು ಯೋಚನೆಯೇ? ಬಿಡಯ್ಯ, ನಿನ್ನ ಪುಸ್ತಕ ಚನ್ನಾಗಿಲ್ಲವೆಂದು ಹೇಳಬೇಕಾದರೆ ಅವರು ಮೂರು ಕಣ್ಣಿಟ್ಟುಕೊಂಡಿರಬೇಕು. ಅದು ಹೇಗೆ ಧೈರ್ಯ ಮಾಡುತ್ತಾರೋ ನೋಡೋಣ".

"ನನ್ನನ್ನು ಕಂಡರೆ ಅವರೇಕೆ ಹೆದರಬೇಕು? ನಾನು ಯಾವರೀತಿ ಅವರಿಗೆ ಪ್ರತೀಕಾರವನ್ನು ಮಾಡಬಲ್ಲೆ? ಒಂದುವೇಳೆ ಹಾಗೆ ಮಾಡಲು ಶಕ್ತನೆಂದು ಅವರು ಭಾವಿಸಿದ್ದರೂ ಸತ್ಯಾಂಶವನ್ನು ನುಡಿಯಲು ಅವರು ಹೆದರುವವರಲ್ಲವೆಂದು ನನ್ನ ನಂಬಿಕೆ".

"ನೀನು ಅದರ ಯೋಚನೆ ಬಿಡಯ್ಯ. ಒಂದುವೇಳೆ ಅವರು ಸರಿಯಾದ ಅಭಿಪ್ರಾಯ ಕೊಡದೆ ಪುಸ್ತಕ ಅಚ್ಚುಮಾಲು ಪಾದ್ರಿಗಳು ಹಿಂದೆಗೆದರೆ, ಶರ್ಮರನ್ನು ಒಂದು ಕೈ ಮೀರಿಸುವ ಕೃಷ್ಣಭಟ್ಟರ ಕೈಗೆ ಪುಸ್ತಕವನ್ನು ಕೊಟ್ಟು ಅವರಿಂದ ನಾಲ್ಕು ಒಳ್ಳೆಯ ಮಾತು ಅದರಮೇಲೆ ಬರಸಿ ಪುಸ್ತಕವನ್ನು ನಾನು ಅಚ್ಚುಹಾಕಿಸಿ ಕೊಡುತ್ತೇನಯ್ಯಾ. ಅದಕ್ಕೆ ಏಕೆ ಇಷ್ಟು ಯೋಚನೆ".

ಈ ಅಭಿಪ್ರಾಯ ನಂಜಪ್ಪನವರ ಮನಸ್ಸಿನಲ್ಲಿ ಹಿಂದೆಂದೂ ಹೊಳೆದಿರಲಿಲ್ಲ. ಮಾತಿನ ಭರದಲ್ಲಿ ಶಿವರಾಮಯ್ಯನವರ ನಿರುತ್ಸಾಹದಿಂದ ನಿಸ್ತೇಜನಾಗಿದ್ದ ಮುಖದ ಮೇಲೆ ಉತ್ಸಾಹಾಂಕುರವನ್ನುಂಟುಮಾಡಲು ಮುದ್ರಣಕೆಲಸದ ಭಾರವೆಷ್ಟೆಂಬುದನ್ನು ಸ್ವಲ್ಪವೂ ತಿಳಿಯದೆ ಭರವಸೆ ಕೊಟ್ಟರು. ಶಿವರಾಮಯ್ಯನವರು "ನನಗೆ ಇಷ್ಟು ಧೈರ್ಯಹೇಳುವವರು ಬೇರೆ ಯಾರಿದ್ದಾರೆ ಚಿಕ್ಕಪ್ಪ. ಇವತ್ತೋ ನಾಳೆಯೋ ಶರ್ಮರ ಅಭಿಪ್ರಾಯ ಗೊತ್ತಾಗುತ್ತದೆ. ಆಮೇಲೆ ಬೇರೇ ಯೋಚನೆ ಮಾಡೋಣ.

ನಿಜವಾಗಿಯೂ ಪುಸ್ತಕದ ವಿಷಯ ನಾನು ಮನಸ್ಸಿಗೆ ಅಷ್ಟು ಹಚ್ಚಿಕೊಂಡಿಲ್ಲ. ಮಗುವಿನ ಜೊತೆಯಲ್ಲಿದ್ದರೆ ಮನಸ್ಸಿಗೆ ಏನೋ ಒಂದು ಸಂತೋಷ ಅಷ್ಟೇ".

"ಹೋಗಲಿ ಬಿಡಪ್ಪ. ನಾನು ಹೊರಗೆ ಹೋಗಿ ಬರುತ್ತೇನೆ" ಎಂದು ಹೇಳಿ ನಂಜಪ್ಪನವರು ಹೊರಟರು.

ರಾತ್ರಿಯಲ್ಲಿ ತಾವು ಗುಣಾಕಾರಹಾಕಿಕೊಂಡಿದ್ದ ಯೋಚನೆ ಒಂದು ಕ್ಷಣದಲ್ಲಿ ಬದಲಾಯಿಸಿತು ಅದರ ಸ್ಥಳದಲ್ಲಿ ಈಗ ಹೊಸದೊಂದು ಅಭಿಪ್ರಾಯ ಬಂದಿತು. ಶಿವರಾಮಯ್ಯನವರು ಮನಸ್ಸು ಚಿಕ್ಕದು ಮಾಡಿಕೊಂಡು ಊರಿಗೆ ಹಿಂದಿರುಗದಂತೆಮಾಡಲು ಪಾದ್ರಿಯವರು ಪುಸ್ತಕವನ್ನು ಪ್ರಕಟಿಸದಿದ್ದರೆ ತಾವೇ ಪುಸ್ತಕವನ್ನು ಪ್ರಕಟಿಸಬೇಕು. ಅದಕ್ಕೆ ಆಗುವ ಖರ್ಚು ಎಷ್ಟಾಗಬಹುದು? ದುಡ್ಡು ಬಹಳವಾದರೆ ರಾಮಸ್ವಾಮಿಯ ಸಂಬಳದಲ್ಲಿ ಉಳಿಸಿರುವ ಅಲ್ಪ ಸ್ವಲ್ಪ ಸಾಕಾಗದಿರಬಹುದು. ಇಷ್ಟೇ ಆಗಬಹುದೆಂಬುದನ್ನು ತಿಳಿಯಲು ಉತ್ಸುಕರಾಗಿ ತಮ್ಮ ಪರಿಚಯಸ್ಥನಾದ ಪುಸ್ತಕವ್ಯಾಪಾರಿ ರಂಗಶೆಟ್ಟಿಯ ಅಂಗಡಿಯಕಡೆ ಹೊರಟರು.

ರಂಗಶೆಟ್ಟಿಯ ವ್ಯಾಪಾರ ಒಂದುತರಹದ್ದಲ್ಲ. ಪುಸ್ತಕಗಳು ಚೀನಾ ಜಪಾನು ದೇಶದ ಬೊಂಬೆಗಳೂ ಸಾಬೂನು ಚರ್ಮದ ಸೊಂಟಪಟ್ಟಿಗಳು ಕನ್ನಡಿಗಳು ಪಟಗಳು ಆಯುರ್ವೇದಶಾಸ್ತ್ರರೀತ್ಯಾ ತಯಾರಿಸಿದ ಸಿದ್ಧೌಷಧಗಳು ಪಾಶ್ಚಿಮಾತ್ಯ ವೈದ್ಯಕೀಯ ಔಷಧಗಳು ಇತ್ಯಾದಿ ಇತ್ಯಾದಿಯಾಗಿ ಅನೇಕ ಪದಾರ್ಥಗಳು ಅಲ್ಲಿ ಸಿಕ್ಕುತ್ತಿದ್ದುವು. ಹಳ್ಳಿಯ ಜನರಿಗೆ ಯಾವ ಕಾಹಿಲೆ ಎಂಬುದನ್ನು ಸ್ಥಿರಪಡಿಸಿ ಅದಕ್ಕೆ ತಕ್ಕ ರಾಮಬಾಣದಂತಹ ಔಷಧಿಯನ್ನೂ ಕೂಡ ಶೆಟ್ಟಿಯು ಎಷ್ಟೋಸಲ ಕೊಟ್ಟು ಯಶಸ್ಸು ಸಂಪಾದಿಸಿದ್ದನು. ಬಹಳ ಬಡತನದಲ್ಲಿ ವ್ಯಾಪಾರ ಪ್ರಾರಂಭಮಾಡಿ ಮುಂದಕ್ಕೆ ಬಂದಿದ್ದ ರಂಗಶೆಟ್ಟಿಯನ್ನು ನೋಡಿ ನಂಜಪ್ಪನವರು ಮೆಚ್ಚಿದ್ದರು. ಆತನ ಅಭಿಪ್ರಾಯಕ್ಕೆ ಬಹಳ ಮನ್ನಣೆ ಕೊಡುತ್ತಿದ್ದರು ಆದುದರಿಂದಲೇ ಪುಸ್ತಕ ಅಚ್ಚುಹಾಕಿಸುವುದರ ಸಾಧಕ ಬಾಧಕಗಳನ್ನು ತಿಳಿದುಕೊಳ್ಳಲು

ಅಲ್ಲಿಗೆ ಬಂದರು. ರಂಗಶೆಟ್ಟಿಗೂ ನಂಜಪ್ಪನವರಲ್ಲಿ ಒಂದು ತರಹ ಗುರುತ್ವ. ಬಂದವರನ್ನು ನೋಡಿ " ನಮಸ್ಕಾರ, ದಯಮಾಡಬೇಕು. ಕುಳಿತುಕೊಳ್ಳಿ " ಎಂದು ಎದ್ದುನಿಂತು ಒಂದು ಕುರ್ಚಿಯನ್ನು ತೋರಿಸಿದನು.

" ಒಳ್ಳೆಯದಪ್ಪಾ, ಏನು ವಿಶೇಷ ? " ಎಂದು ಕೇಳುತ್ತಾ ಕುರ್ಚಿಯ ಮೇಲೆ ಕುಳಿತರು.

" ಏನೂ ಇಲ್ಲ. ಎಲ್ಲಾ ನೀವೇ ಹೇಳಬೇಕು. ಈದಿನ ಪತ್ರಿಕೆಯನ್ನು ನೋಡಿದಿರಾ " ?

" ಇಲ್ಲ, ಏನು ವರ್ತಮಾನ " ?

" ಆ ಅಮೇರಿಕದ ಪಾದ್ರಿ ಇದ್ದಾನಲ್ಲ. ಅವನು ನಿಮಗೆ ಗೊತ್ತೇ " ?

" ಸ್ವಲ್ಪ ಪರಿಚಯವಿದೆ. ಏನು ಆತನ ವಿಚಾರ " ?

" ನಿನ್ನೆ ಸಾಯಂಕಾಲ ಆತನ ಮೋಟಾರಿಗೂ ಇನ್ನೊಂದು ಮೋಟಾರಿಗೂ ಢಿಕ್ಕಿ ಆಯಿತಂತೆ " !

" ಹಾಗೇನು ! ಯಾರಿಗೂ ಅಪಾಯವಾಗಲಿಲ್ಲವಷ್ಟೆ " ?

" ಏನು ಸ್ವಾಮಿ, ಹೀಗೆ ಹೇಳುತ್ತೀರಿ. ಢಿಕ್ಕಿ ಹೊಡೆಸಿದವನು ಅಲ್ಲೇ ಪ್ರಾಣಬಿಟ್ಟನಂತೆ. ಪಾದ್ರಿಗೂ ಆತನ ಜೊತೆಯಲ್ಲಿ ಕುಳಿತಿದ್ದ ಆತನ ಮುದ್ರಣಾಲಯದ ಮೇಲ್ವಿಚಾರಕನಿಗೂ ಬಹಳ ಗಾಯವಾಗಿ ಪ್ರಜ್ಞೆತಪ್ಪಿದೆಯಂತೆ. ಇಬ್ಬರನ್ನೂ ಆಸ್ಪತ್ರೆಗೆ ಹಾಕಿದ್ದಾರಂತೆ ".

" ಯಾರು ಢಿಕ್ಕಿ ಹೊಡೆಸಿದವರು ? ಯಾಕೆ ಢಿಕ್ಕಿ ಆಯಿತಂತೆ " ?

" ಢಿಕ್ಕಿ ಹೊಡೆಸಿದವನು ಕಾಡುಮನೆ ಕಾಫೀ ತೋಟದ ಹಂಪ್ರೆ. ಏಕೆ ಹೊಡೆಸಿದನೋ ದೇವರೇ ಬಲ್ಲ । ಅವನೇ ನಡಸುತ್ತಿದ್ದನಂತೆ. ಎಲ್ಲೋ, ಕ್ಲಬ್ಬಿಗೆ ಹೋಗುತ್ತಿದ್ದ ಅಂತ ಕಾಣುತ್ತದೆ. ಆತುರ " !

"ಅಯ್ಯೋ ಪಾಪ! ಟಾನಸ್ಲೇ ಸ್ಥಿತಿ ಹೇಗಿದೆಯಂತೆ"?

"ಹೇಗಾದರೂ ಇರಲಿ ಬಿಡಿ ಸ್ವಾಮಿ. ನಮಗೇನು"?

"ಹಾಗಲ್ಲ ರಂಗಶೆಟ್ಟೀ, ಅವರದೂ ನಮ್ಮ ಹಾಗೇ ಜೀವ. ನಮ್ಮ ಹಾಗೆ ಅವರಿಗೂ ಹೆಂಡಿರು ಮಕ್ಕಳು ಇರುವುದಿಲ್ಲವೇ"?

"ಹಾಗೇನು ಅಯ್ಯೋ ಪಾಪ! ಅಂದಂದೇ ಅವರೀಗ ನಮ್ಮ ತಲೇಮೇಲೆ ಬಂದು ಕೂತಿದ್ದಾರೆ. ಆ ಜನಕ್ಕೆ ಅಯ್ಯೋ ಪಾಪ, ಅಂದೋರುಂಟೇ. ಅವರು ನಮ್ಮ ದೇಶಕ್ಕೆ ಬಂದಾಗ ಅವರನ್ನು ಎಲ್ಲಿಟ್ಟರಬೇಕೋ ಅಲ್ಲಿಟ್ಟಿದ್ದರೆ ನಾವೀಗ ಅವರ ಗುಲಾಮರಾಗಬೇಕಾಗಿತ್ತೇನು ಸ್ವಾಮಿ? ನಮ್ಮ ಜನ ಯಾವಾಗಲೂ ಅಷ್ಟೆ. ಏನೋ ಭೂತದಯೆ ಪಶ್ಚಾತ್ತಾಪ ಅಂದುಕೊಂಡು ಕೆಟ್ಟ ಹುಳುಗಳಿಗೆ ಕೂಡ ಸಹಾಯಮಾಡೋದು. ಅವು ಬಂದು ನಮ್ಮ ತಲೇಮೇಲೆ ಕೂತುಕೊಳ್ಳೋದು, ಬಿಡೀ ಸ್ವಾಮೀ".

"ಹಂಪ್ರೆಯೇನೋ ಇಂಗ್ಲೀಷಿನವನು. ನೀನು ಹೇಳಿದ್ದು ಅವನಿಗೆ ಅನ್ವಯಿಸುತ್ತೆ. ಪಾಪ ಟಾನಸ್ಲೇ ಅಮೇರಿಕದವ. ಅವರೇನಯ್ಯ ನಮಗೆ ಮಾಡಿರೋದು. ಅವರು ಬಹಳ ಒಳ್ಳೆಯವರಯ್ಯಾ".

"ಎಲ್ಲಾ ನೋಡಿದೀನಿ ಸ್ವಾಮೀ. ಇಂಗ್ಲೀಷಿನವರಿಗೆ ರಾಜ್ಯ ಸಿಕ್ಕಿದೆ. ಅವರು ನಮ್ಮ ಯಜಮಾನ್ರು, ನಮ್ಮನ್ನು ಗುಲಾಮರ ಹಾಗೆ ಕಾಣ್ತಾರೆ. ನಾಳೆ ಈ ಅಮೇರಿಕಾದೋರಿಗೆ ರಾಜ್ಯ ಸಿಕ್ಕಲಿ, ಆಗ ನೋಡುವಿರಂತೆ ಅವರು ನಮಗೆ ಮಾಡುವ ಪೂಜೆ".

"ನೀನೇನಯ್ಯಾ, ಬಿಳೀಜನಗಳೆಲ್ಲಾ ಕೆಟ್ಟೋರೂಂತಲೇ ಹೇಳು ತ್ತೀಯಾ"?

"ಹಾಗಲ್ಲ ಸ್ವಾಮೀ, ಅವರಲ್ಲೂ ಒಳ್ಳೆಯವರು ಇದ್ದಾರೆ. ಆದರೆ ಅವರು ನೂರಕ್ಕೊಂದೋ ಎರಡೋ. ನಾನು ಹೇಳೋದು ಒಟ್ಟಿನ ಮಾತು. ಏನು ಸ್ವಾಮಿ, ಅಂಗಡೀಕಡೇ ಬಂದರಲ್ಲ"?

"ನಿನ್ನಲ್ಲಿ ಏನೋ ಒಂದು ವಿಚಾರ ಪ್ರಸ್ತಾಪ ಮಾಡಬೇಕೆಂದು ಬಂದೆ. ಆದರೆ ಈ ವಿಚಾರ ಕೇಳಿದಮೇಲೆ ಮನಸ್ಸು ಏನೋ ಒಂದು ತರಹ ಆಗಿದೆ. ನಾಳೆ ಬರುತ್ತೇನೆ. ಯಾವ ಪತ್ರಿಕೆಯಲ್ಲಿ ಈ ವಿಚಾರ ಬಂದಿದೆ"?

"ಎಲ್ಲಾ ಪತ್ರಿಕೆಗಳಲ್ಲೂ ಬಂದಿದೆ, ಇದೋ ನೋಡಿ" ಎಂದು ಹೇಳುತ್ತಾ ಒಂದು ಪತ್ರಿಕೆಯನ್ನು ತೆಗೆದು ಸುದ್ದಿ ಇದ್ದ ಸ್ಥಳವನ್ನು ತೋರಿಸಿದನು.

ನಂಜಪ್ಪನವರು ಪತ್ರಿಕೆಯನ್ನು ಒಂದುಸಲ ಓದಿ ನೋಡಿದರು. ಮನಸ್ಸಿನಲ್ಲಿಯೇ ಇದು ಶಿವಣ್ಣನ ಹೀನ ಅದೃಷ್ಟವೆಂದುಕೊಂಡರು. ವಿಚಾರ ಅವನಿಗೆ ತಿಳಿಸಬೇಕೆಂಬ ಆತುರ ಉಂಟಾಯಿತು. "ರಂಗಶೆಟ್ಟಿ, ಈ ಪತ್ರಿಕೆ ನಾನು ತೆಗೆದುಕೊಂಡು ಹೋಗಲೇ? ಇದರ ದುಡ್ಡನ್ನು ಗುರುತುಹಾಕಿ ಕೊಂಡಿರು. ನಾನು ಸಾಯಂಕಾಲ ಈಕಡೆ ಬಂದಾಗ ತಂದುಕೊಡುತ್ತೇನೆ".

"ಹಾಗೇ ಆಗಲಿ ಸ್ವಾಮಿ. ಅದಕ್ಕೇನು. ನೀವು ದುಡ್ಡು ಕೊಡಲೇ ಬೇಕೇ? ಕೊಡದಿದ್ದರೂ ಆಗುತ್ತಿತ್ತು. ಸಾಯಂಕಾಲವಲ್ಲದಿದ್ದರೆ ನಾಳೆ ಕೊಡಿ"

ಮನೆಗೆ ಬಂದು ಊಟವಾದಮೇಲೆ ತಾಂಬೂಲ ಹಾಕಿಕೊಳ್ಳುತ್ತಾ ಶಿವರಾಮಯ್ಯನವರಿಗೆ ವರ್ತಮಾನ ತಿಳಿಸಿ, ಪತ್ರಿಕೆ ಓದಲು ಕೊಟ್ಟರು. ಓದುತ್ತಲೇ ಶಿವರಾಮಯ್ಯನವರ ಕಣ್ಣಿನಲ್ಲಿ ನೀರು ತುಂಬಿಕೊಂಡಿತು. "ಅದೃಷ್ಟ ಹೀನರಿಗೆ ಸಹಾಯಮಾಡಲು ಹೊರಟಿದ್ದಕ್ಕೆ ಅವರಿಗೆ ಈ ದುರ್ದೆಶೆ ಪ್ರಾಪ್ತವಾಯಿತು. ಅವರು ಇರುವ ಆಸ್ಪತ್ರೆ ನಿಮಗೆ ಗೊತ್ತೇ ಚಿಕ್ಕಪ್ಪ? ಅಲ್ಲಿಗೆ ಹೋಗಿ ಅವರನ್ನು ನೋಡಿಕೊಂಡು ಬರೋಣವೇ"?

"ಆಗಲಿ ಹೋಗೋಣ. ಆದರೆ ಸಾಯಂಕಾಲ ಐದು ಗಂಟೆಯ ಮೇಲೆ ಮಾತ್ರ ಆಸ್ಪತ್ರೆಯೊಳಕ್ಕೆ ಬಿಡುತ್ತಾರೆ. ಸಾಯಂಕಾಲ ಹೋಗೋಣ ನೀನೇಕೆ ಮನಸ್ಸು ಚಿಕ್ಕದು ಮಾಡಿಕೊಳ್ಳುತ್ತೀ? ಅದು ಅವರ ಹಣೆಯಲ್ಲಿ ಬರೆದಿತ್ತು. ಅನುಭವಿಸುತ್ತಾರೆ. ನೀನೇನು ಮಾಡಬಲ್ಲೆ"?

“ ಟಾನಸ್ಲೀಯವರೂ ಮುದ್ರಣಾಲಯದ ಮೇಲ್ವಿಚಾರಕರೂ ಇಬ್ಬರು ಒಟ್ಟಿಗೆ ಇದ್ದರೆಂದು ಪತ್ರಿಕೆಯಲ್ಲಿದೆ. ಅಲ್ಲದೆ ಪುಸ್ತಕ ಹಿಂದಕ್ಕೆ ತರುವ ದಿನವೂ ನಿನ್ನೆಯೇ. ಆದುದರಿಂದ ನನ್ನ ಪುಸ್ತಕದ ಸಂಬಂಧದಲ್ಲಿಯೇ ಅವರಿಬ್ಬರೂ ಇಲ್ಲಿಗೋ ಶರ್ಮರ ಮನೆಗೋ ಹೊರಟಿದ್ದರೆಂದೇ ನನ್ನ ಊಹೆ”.

“ ಇದ್ದರೂ ಇರಬಹುದು. ಆದರೆ ಹಂಪ್ರಿ ನಿನ್ನ ಕೆಲಸದಮೇಲೆ ಹೊರಟಿರಲಿಲ್ಲವಲ್ಲ. ಅವನು ಸತ್ತು ಇವರು ಬದುಕಿರುವುದನ್ನು ನೋಡಿದರೆ ನಿನಗೆ ಸಹಾಯಮಾಡಲು ಹೊರಟ ಪುಣ್ಯದಿಂದ ಇಬ್ಬರೂ ಬದುಕಿಕೊಂಡ ರೆಂದು ಏಕೆ ಹೇಳಬಾರದು. ಇದೆಲ್ಲಾ ಹಣೇ ಬರಹವಯ್ಯ. ಯಾರೂ ಕಾರಣರಲ್ಲ. ನೀನು ಸುಮ್ಮನೇ ಕೊರಗಬೇಡ. ಸಾಯಂಕಾಲ ಆಸ್ಪತ್ರೆಗೆ ಹೋಗಿ ಬಂದಮೇಲೆ ವಿಚಾರ ಚೆನ್ನಾಗಿ ಗೊತ್ತಾಗುತ್ತೆ. ನಾನು ಸ್ವಲ್ಪ ಮಲಗಿ ಏಳುತ್ತೇನೆ. ನೀನೂ ಹಾಗೇ ಸ್ವಲ್ಪ ವಿಶ್ರಮಿಸಿಕೋ”.

## ೧೫

ಭಾರತ ಭೂಮಿಗೆ ಹೊರಗಿನಿಂದ ಬಂದ ಮುಖ್ಯ ಮತಗಳ ಅನು ಯಾಯಿಗಳು ತಮ್ಮ ಮತ ಪ್ರಸಾರಮಾಡಲು ಅನುಸರಿಸಿದ ಮಾರ್ಗಗಳು ಬೇರೆ ಬೇರೆ ರೀತಿಯವು. ಪವಿತ್ರ ಪೈಗಂಬರರ ಶಿಷ್ಯರು ಕರ್ಣ ರಸಾಯನ ವೆಂದು ಪ್ರಖ್ಯಾತಿ ಪಡೆದಿರುವ ಖುರಾನನ್ನು ಕತ್ತಿಯ ಮೊನೆಯಿಂದ ಭಾರತೀಯರ ಕಿವಿಯೊಳಗೆ ನೂಕಲು ಪ್ರಯತ್ನಪಟ್ಟು ಬಹಳಮಟ್ಟಿಗೆ ಜಯ ಶಾಲಿಗಳಾದರು. ‘ ಒಂದು ಕೆನ್ನೆಗೆ ಹೊಡೆದವನಿಗೆ ನಿನ್ನ ಇನ್ನೊಂದು ಕೆನ್ನೆಯನ್ನೂ ತೋರಿಸು ’ ಎಂದು ಸಾರಿದ ಯೇಸುವಿನ ಅನುವರ್ತಿಗಳು ತಮ್ಮ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಲು ಮಾಡಿದ, ಮಾಡುತ್ತಿರುವ ಪ್ರಯತ್ನಗಳ ರೀತಿಯೇ ಬೇರೆ. ಬಾಲಕ ಬಾಲಕಿಯರ ಉಪಯೋಗಕ್ಕಾಗಿ ಅಲ್ಲಲ್ಲೇ ಶಾಲೆಗಳನ್ನೂ ; ರೋಗಿಗಳ ಸಹಾಯಕ್ಕಾಗಿ, ಉಪಚಾರಕ್ಕಾಗಿ ಔಷಧಾಲಯ ಗಳನ್ನೂ ಆಸ್ಪತ್ರೆಗಳನ್ನೂ ಸ್ಥಾಪಿಸಿ ದೇವಕುಮಾರನು ಬೋಧಿಸಿದ ರೀತಿ ಜ್ಞಾನಪ್ರಸಾರ, ರೋಗನಿವಾರಣಾ ಕಾರ್ಯಗಳನ್ನು ಬಹಳವಾಗಿ ಮಾಡಿದರು;

ಮಾಡುತ್ತಲೂ ಇರುವರು. ತನ್ಮೂಲಕ ಜನಗಳ ಹೃದಯವನ್ನು ತಮ್ಮ ಕಡೆಗೆ ಒಲಿಸಿಕೊಂಡು, ಅವರನ್ನು ದಾಕ್ಷಿಣ್ಯಕ್ಕೆ ಒಳಪಡಿಸಿಕೊಂಡು ಕ್ರೈಸ್ತ ಧರ್ಮದ ಆವರಣಕ್ಕೆ ಸೇರಿಸಿಕೊಳ್ಳಲು ಪ್ರಯತ್ನ ಮಾಡಿದರು; ಮಾಡುತ್ತಿರುವರೆಂದು ದೂರು ಬಂದಿದೆ. ಕೆಲವೆಡೆಗಳಲ್ಲಿ ನಡೆಯುತ್ತಿರುವ ಅಕ್ರಮ ಕೆಲಸಗಳನ್ನು ನೋಡಿದರೆ ಕೆಲವು ಪಾದ್ರಿಗಳಂತೂ ಆ ಉಪಯುಕ್ತ ಸಂಸ್ಥೆಗಳು ಮತಪ್ರಸಾರಕ್ಕೆ ಸಾಧನಗಳೆಂಬ ಅಭಿಪ್ರಾಯವನ್ನು ಮಾತ್ರ ಹೊಂದಿರುವರೆಂದು ಧಾರಾಳವಾಗಿ ಹೇಳಬಹುದು. ಧರ್ಮಬೋಧಕರು ತಮ್ಮ ಮತದ ವೈಶಿಷ್ಟ್ಯವನ್ನು ಜನಗಳಿಗೆ ವಿವರಿಸಿ ಅದರ ಮೇಲ್ಮೆಯನ್ನು ಮನಗಾಣಿಸಿ, ಹೃದಯ ಪರಿವರ್ತನೆ ಮಾಡಿ ತಮ್ಮ ಧರ್ಮವನ್ನು ಅವರು ಅವಲಂಬಿಸುವಂತೆ ಮಾಡಿದರೆ ಅದು ಸ್ತೋತ್ರಾರ್ಹವಾದ ಕೆಲಸ. ಬಲವಂತದಿಂದ ಉಪಾಯಾಂತರಗಳಿಂದ ಮತ ಪ್ರಸಾರಮಾಡಲು ಹೊರಟರೆ, ಅದು ಮತಸ್ಥಾಪಕರ ಪವಿತ್ರ ಉಪದೇಶಗಳಿಗೇ ವ್ಯತಿರಿಕ್ತವಾಗಿ ಹೋದಂತಾಗಿ ಆ ಮತೀಯರ ವಿಷಯದಲ್ಲಿ ತಪ್ಪು ಅಭಿಪ್ರಾಯಗಳು ಜನಗಳ ಮನಸ್ಸಿನಲ್ಲಿ ಬೇರೂರುವುದರಲ್ಲಿ ಸಂದೇಹವಿಲ್ಲ.

ಮತ ಸಂಬಂಧವಾದ ಈ ದೂರು ಇದ್ದರೂ, ಸರ್ಕಾರವು ಈ ಮುಖ್ಯ ಕ್ಷೇತ್ರಗಳಲ್ಲಿ ತನ್ನ ಕರ್ತವ್ಯವನ್ನು ಅರಿತು ಕಾರ್ಯರಂಗಕ್ಕೆ ಇಳಿಯುವವರೆಗೂ ಕ್ರೈಸ್ತ ಪಾದ್ರಿಗಳಿಂದ ನಡೆಸಲ್ಪಟ್ಟ ಈ ಸಂಸ್ಥೆಗಳು ಬಹಳಮಟ್ಟಿಗೆ ಪ್ರಜೆಗಳಿಗೆ ಸಹಾಯ ಮಾಡಿದವು. ಈಗಲೂ ಹಲವೆಡೆಗಳಲ್ಲಿ ಪಾದ್ರಿಗಳ ನೇತೃತ್ವದಲ್ಲಿರುವ ಈ ಸಂಸ್ಥೆಗಳೇ ಸರ್ಕಾರೀ ಸಂಸ್ಥೆಗಳಿಗಿಂತ ಜನಗಳಿಗೆ ಹೆಚ್ಚು ಸೌಕರ್ಯಗಳನ್ನು ಒದಗಿಸಿಕೊಟ್ಟು ಜನಾದರಣೀಯವಾಗಿರುವುವು. ಇಂತಹ ಸಂಸ್ಥೆಗಳಲ್ಲಿ ವಿಜಯಪುರದಲ್ಲಿ ಅಮೇರಿಕದ ಪಾದ್ರಿಗಳು ನಡೆಸಿಕೊಂಡು ಬರುತ್ತಿದ್ದ ಆಸ್ಪತ್ರೆಯೂ ಒಂದಾಗಿದೆ. ಆಧುನಿಕ ಸಾಮಗ್ರೀ ಸಲಕರಣೆಗಳನ್ನು ಹೊಂದಿ ಎಲ್ಲ ತರಹ ರೋಗಿಗಳಿಗೂ ಮೇಲ್ತರದ ಚಿಕಿತ್ಸೆಯನ್ನೊದಗಿಸುವುದರಲ್ಲಿ ಪ್ರಸಿದ್ಧಿಪಡೆದಿದೆ. ಕಟುತರವಾದ ಕಾಹಿಲೆಯಿಂದ ನರಳುವವರನ್ನು ಆಸ್ಪತ್ರೆಯಲ್ಲೇ ಇಟ್ಟುಕೊಂಡು ಉಪಚರಿಸಲು ವಸತಿಗಳು ಏರ್ಪಡಿಸಲ್ಪಟ್ಟಿದ್ದುವು. ಟಾನಸ್ಲೇಯವರನ್ನೂ ಇಂತಹ ವಸತಿಗಳೊಂದರಲ್ಲಿ ಮಂಚದಮೇಲೆ ಮಲಗಿಸಿದ್ದರು. ಮುಖವೆಲ್ಲಾ ಗಾಯ

ವಾಗಿದ್ದುದರಿಂದ ಔಷಧಿಯನ್ನು ಸವರಿ ಮೇಲೆ ಹತ್ತಿಯಿಟ್ಟು ಬಿಳಿಯ ಬಟ್ಟೆಯನ್ನು ಸುತ್ತಿದ್ದರು. ಹೊರಗಡೆ ಕಾಣುತ್ತಿದ್ದ ಅವರ ಮುಖದ ಭಾಗವೆಂದರೆ ಮೂಗಿನ ಸೊಳ್ಳೆಗಳು, ಎರಡು ತುಟಿಗಳು.

ಆಸ್ಪತ್ರೆಗೆ ಸೇರಿದಮೇಲೂ ಟಾನಸ್ಲೇಯವರಿಗೆ ಇಹಲೋಕದ ಜ್ಞಾನವೇ ಇರಲಿಲ್ಲ. ವೈದ್ಯರೆಲ್ಲರಿಗೂ ಬಹಳ ಗಾಬರಿಯಾಯಿತು. ಲಿಲ್ಲಿಯವರೇ ಸ್ವತಃ ದಾದಿಯ ಕೆಲಸವನ್ನು ಕೈಗೊಂಡು ಅವರ ಹಾಸಿಗೆಯ ಪಕ್ಕದಲ್ಲಿ ಕುಳಿತು ಶುಶ್ರೂಷೆಮಾಡಲಾರಂಭಿಸಿದರು. ಎದುರಿಗೆ ಯಾರೂ ಇಲ್ಲದಾಗ ಕಂಬನಿಗಳು ಒಂದೊಂದಾಗಿ ಉದುರಿ ಕೆನ್ನೆಯನ್ನು ತೋಯಿಸಿ ಕರವಸ್ತ್ರವನ್ನು ಒದ್ದೆಮಾಡುತ್ತಿದ್ದವು. ಇತರರು ಇದ್ದಾಗ ಬೇಕಾಗ ಸಲಕರಣೆಗಳನ್ನು ತರಲು ಜಿಂಕೆಯಂತೆ ಓಡಾಡಿ ಎಲ್ಲರಿಗಿಂತಲೂ ಹೆಚ್ಚಾಗಿ ಧೈರ್ಯವನ್ನು ಪ್ರದರ್ಶಿಸುತ್ತಿದ್ದರು ಶುಕ್ರವಾರ ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಟಾನಸ್ಲೇಯವರು ಸ್ವಲ್ಪ ನರಳಿದರು. ರೋಗಿಗಳು ನರಳಿದರೆ ಸಾಧಾರಣವಾಗಿ ಕೇಳುವವರ ಮನಸ್ಸಿಗೆ ಸ್ವಲ್ಪ ಯಾತನೆ. ಆದರೆ ಈ ನರಳಿದ ಶಬ್ದವನ್ನು ಕೇಳುತ್ತಲೇ ಕಾರ್ಮೋಡದ ಮೇಲೆ ಉದಯಿಸುವ ಮಿಂಚಿನಂತೆ ಲಿಲ್ಲಿಯವರ ಕಣ್ಣಿನಲ್ಲಿ ಒಂದು ಹೊಳಪು ಬಂತು. ಕುರ್ಚಿಯಿಂದ ಮುಂದೆಬಗ್ಗಿ ಇನ್ನೂ ಚೆನ್ನಾಗಿ ಆಲಿಸಿದರು. ಪತಿಗೆ ಇಹಲೋಕದ ಜ್ಞಾನ ಬಂದುದಕ್ಕೆ ಮನಸ್ಸಿನಲ್ಲೇ ದೇವರಿಗೆ ವಂದನೆಯನ್ನರ್ಪಿಸಿದರು.

ಆ ಸಮಯಕ್ಕೆ ಸರಿಯಾಗಿ ಆಳು ಮೆಲ್ಲನೆ ಒಳಗೆ ಬಂದು " ತಾಯಿ, ಯಾರೋ ಇಬ್ಬರು ಸಾಹೇಬರನ್ನು ನೋಡಲು ಬಂದಿದಾರೆ. ಒಳಗೆಬರಲು ಸಾಧ್ಯವಿಲ್ಲವೆಂದು ಹೇಳಿದೆ. ತಮಗೆ ತಿಳಿಸಬೇಕೆಂದು ಹೇಳಿದರು. ನಿಮಗೆ ಅನಾನುಕೂಲವಾಗದಿದ್ದರೆ ನಿಮ್ಮೊಡನೆ ಎರಡು ಮಾತನಾಡಬೇಕಂತೆ" ಎಂದು ಪಿಸುಗುಟ್ಟಿದನು.

" ಒಳ್ಳೆಯದು. ಹಿರಿಯದಾದಿ ಮೇರಿಯನ್ನು ಸ್ವಲ್ಪ ಬರಹೇಳು ".

ಮೇರಿ ಬರುತ್ತಲೇ ಲಿಲ್ಲಿಯವರು ಆಕೆಯನ್ನು ಅಲ್ಲಿ ಕೂಡಿಸಿ ರೋಗಿಯು ಹೊರಳಿ ಮುಖಕ್ಕೆ ಪೆಟ್ಟುಮಾಡಿಕೊಳ್ಳದಂತೆ ಎಚ್ಚರಿಕೆಯಿಂದ ನೋಡಿ

ಕೊಳ್ಳಬೇಕೆಂದು ಹೇಳಿ ಹೊರಗೆ ಬಂಗರು. ಶಿವರಾಮಯ್ಯನವರೂ ನಂಜಪ್ಪನವರೂ ಮುಂವಲ ಕೊಠಡಿಯಲ್ಲಿ ಕುಳಿತಿದ್ದರು.

"ಏನು! ಸ್ನೇಹಿತರನ್ನು ನೋಡಿಕೊಂಡು ಹೋಗಲು ಬಂದಿರಲ್ಲವೇ? ಬಹಳ ಒಳ್ಳೆಯದು. ಆಳಿಗೆ ನೀವಾರೆನ್ನುವುದು ಗೊತ್ತಾಗಲಿಲ್ಲ. ಟಾನಸ್ಲೇಯವರಿಗೆ ಈಗ ಸ್ವಲ್ಪಮಟ್ಟಿಗೆ ಜ್ಞಾನ ಬಂಗಂತಿದೆ. ಆದರೆ ಅವರು ಮಾತನಾಡುವ ಸ್ಥಿತಿಯಲ್ಲಿಲ್ಲ. ಬಹುಶಃ ನೀವು ಅವರನ್ನು ನೋಡಲು ಆತುರರಾಗಿದ್ದೀರಿ ಒಳಗೆ ಬನ್ನಿ. ಅವರನ್ನು ನೋಡಿಕೊಂಡು ಬಂದು ಆ ಮೇಲೆ ಇಲ್ಲಿ ಮಾತನಾಡೋಣ" ಎಂದು ಹೇಳುತ್ತಾ ಇಬ್ಬರನ್ನೂ ಒಳಗೆ ಕರೆದುಕೊಂಡು ಹೋದರು.

ಪಾದ್ರಿಗಳ ಸ್ಥಿತಿಯನ್ನು ನೋಡಿ ಶಿವರಾಮಯ್ಯನವರಿಗೆ ಕಣ್ಣಿನಲ್ಲಿ ನೀರು ಬಂದಿತು. ಇಂತಹ ದೃಶ್ಯಗಳು ಅವರಿಗೆ ಅಪೂರ್ವ. ಅಪೂರ್ವವೇನು ಹಿಂದೆಂದೂ ನೋಡಿಯೇ ಇರಲಿಲ್ಲ. ಒಂದೇ ಸಮನೆ ಆ ಕಡೆ ನೋಡುತ್ತಾ ತಲೆ ತಿರುಗಿದಹಾಗೆ ಭಾಸವಾಗಲು ಹಾಗೆಯೇ ಗೋಡೆಯನ್ನು ಒರಗಿಕೊಂಡು ನಿಂತರು. ಅನೇಕ ಕಷ್ಟಗಳನ್ನು ನೋಡಿ ಕೆಲವಲ್ಲಿ ಭಾಗವನ್ನೂ ವಹಿಸಿದ್ದ ನಂಜಪ್ಪನವರು ಅವರ ಪಕ್ಕದಲ್ಲಿ ನಿಂತುಕೊಂಡು ಹೊರಗೆ ಹೊರಡಲು ಲಿಲ್ಲಿಯವರಿಂದ ಸೂಚನೆಯನ್ನು ನಿರೀಕ್ಷಿಸುತ್ತ ನಿಂತರು. ಲಿಲ್ಲಿಯವರೂ ಟಾನಸ್ಲೇಯವರ ಮುಖವನ್ನೇ ನೋಡುತ್ತಾ ಪ್ರತಿಮೆಯಂತೆ ಕದಲದೆ ನಿಂತುಬಿಟ್ಟರು. ಒಂದೆರಡು ನಿಮಿಷಗಳಾದನಂತರ ತನ್ನ ಸ್ಥಳವನ್ನು ಬಿಟ್ಟೆದ್ದಿದ್ದ ಮೇರಿಯು ಪಿಸುಮಾತಿನಲ್ಲಿ "ಅಮ್ಮಾ! ನಾನು ಮುದ್ರಣಾಲಯದ ಅಧಿಕಾರಿಗಳ ಕೊಠಡಿಗೆ ಹೋಗಲೇ?" ಎಂದಳು.

"ಅವರೂ ಈ ಮಿತ್ರರಿಗೆ ಪರಿಚಿತರು. ನಾನೇ ಇವರನ್ನು ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ. ನೀವು ಇನ್ನೂ ಸ್ವಲ್ಪ ಹೊತ್ತು ಇಲ್ಲೇ ಇರಿ" ಎಂದು ಹೇಳುತ್ತಾ "ನಿಮ್ಮ ಇನ್ನೊಬ್ಬ ಮಿತ್ರರನ್ನು ತೋರಿಸುತ್ತೇನೆ ಬನ್ನಿ" ಎಂದು ಕೊಠಡಿಯನ್ನು ಬಿಟ್ಟು ಹೊರಟರು.

ಜಾನಯ್ಯನವರನ್ನು ಸ್ವಲ್ಪ ದೂರದಲ್ಲಿದ್ದ ಇನ್ನೊಂದು ಕೊಠಡಿಯಲ್ಲಿ ಮಲಗಿಸಿದ್ದರು. ಅವರಿಗೆ ಹೆಚ್ಚು ಗಾಯಗಳಾಗಿರಲಿಲ್ಲ. ಆದರೂ ಸ್ವಲ್ಪ ವಯಸ್ಸಾಗಿದ್ದುದರಿಂದಲೂ ಶರೀರದಾರ್ಢ್ಯವು ಕಡಿಮೆಯಾಗಿದ್ದುದರಿಂದಲೂ ವಿಪರೀತ ಜ್ವರಬಂದು ಅಸಂಬದ್ಧವಾದ ಮಾತುಗಳನ್ನಾಡಲು ಪ್ರಾರಂಭಿಸಿದ್ದರು. ಅವರ ಶುಶ್ರೂಷೆಯಲ್ಲಿ ನಿರತಳಾಗಿದ್ದ ದಾದಿಗೆ ಅವರು ಹಾಸಿಗೆಯಿಂದ ಎದ್ದು ಓಡಾಡಲು ಪ್ರಯತ್ನಪಡುವುದನ್ನು ನಿಲ್ಲಿಸುವುದೇ ಪ್ರಯಾಸವಾಗಿದ್ದಿತು. ಆಗತಾನೇ ಅವರಿಗೆ ಸ್ವಲ್ಪ ನಿದ್ರೆ ಬಂದಿದ್ದುದರಿಂದ ಒಳಗೆ ಪ್ರವೇಶಿಸಿದ ಮೂವರೂ ಸ್ವಲ್ಪ ಹೊತ್ತು ನಿಶ್ಶಬ್ದತೆಯಿಂದ ಅವರನ್ನು ನೋಡಿ ಹೊರಗೆ ಬಂದರು.

ಹೊರಬಾಗಿಲಿನ ಹತ್ತಿರದ ಕೊಠಡಿಗೆ ಬರುತ್ತಲೇ ಶಿವರಾಮಯ್ಯನವರು "ಅದೃಷ್ಟಹೀನನಾದ ನನಗೆ ಸಹಾಯ ಮಾಡಲು ಹೊರಟ ಈ ಇಬ್ಬರಿಗೂ ಏನು ಕಷ್ಟ ಬಂದಿತು. ತಾವು ವೈದ್ಯರು, ಅವರ ಸ್ಥಿತಿ ಹೇಗಿದೆ ತಾಯಿ"?

"ದೇವರ ಅನುಗ್ರಹದಿಂದ ಪ್ರಾನಬಯವಿಲ್ಲವೆಂದು ನನಗೆ ಕಾನಿಸುತ್ತದೆ. ಚೆನ್ನಾಗಿ ಗುನವಾಗಿ ಓಡಾಡಲು ಇನ್ನು ಎರಡು ಮೂರು ವಾರಗಲಾದರೂ ಬೇಕು. ಆದರೆ ಇದು ನಿಮ್ಮ ದೆಸೆಯಿಂದ ಆಯಿತೆಂದು ನೀವು ತಿಲಿಯಬಾರದು. ಇದು ದೇವರ ಇಸ್ಟ. ಹಾಗೆಯೇ ನಡೆಯಿತು".

"ನಾನೂ ಅದನ್ನೇ ಈತನಿಗೆ ಹೇಳುತ್ತಿದೇನೆ. ಈ ಕಷ್ಟ ಅನುಭವಿಸಬೇಕೆಂದು ಅವರ ಹಣೆಯಲ್ಲಿ ಬರೆದಿತ್ತು. ಅದನ್ನು ತಪ್ಪಿಸಲು ಯಾರಿಂದ ಸಾಧ್ಯ. ಮುಖ್ಯ ಪ್ರಾಣಭಯವಿಲ್ಲವೆಂದು ಹೇಳುತ್ತೀರಿ. ಅದಕ್ಕೆ ನಾವು ಸಂತೋಷಪಡಬೇಕಾಗಿದೆ. ನೋಡೀ ತಾಯಿ! ನಿಮಗೆ ಇರುವ ಧೈರ್ಯ ನಮ್ಮ ಶಿವೂಗೆ ಇಲ್ಲಾ" ಎಂದು ನಂಜಪ್ಪನವರು ಮುಗುಳ್ನಗೆ ನಗುತ್ತಾ ಹೇಳಿದರು.

"ಚಿಕ್ಕಪ್ಪ, ನಿಮ್ಮ ಅನುಭವ, ಲಿಲ್ಲಿಯಮ್ಮನವರ ತಿಳುವಳಿಕೆ ನನಗೆ ಇಲ್ಲ. ನಾನೇನು ಮಾಡಲಿ. ಇಬ್ಬರೂ ಎಲ್ಲಿಗೆ ಹೊರಟಿದ್ದರು ನಿಮಗೆ ಗೊತ್ತೇ"?

"ಸೋಮಶರ್ಮರ ಮನೆಗೆ ಹೋಗಬೇಕೆಂದು ನನಗೆ ತಿಳಿಸಿದ್ದರು. ಅಲ್ಲಿಗೆ ಹೊರಟಿರಬಹುದು. ಆದರೆ ಅದನ್ನೆಲ್ಲಾ ನೀವು ಮನಸ್ಸಿಗೆ ತಂದು ಕೊಳ್ಳಬೇಡಿ ನಾನು ಮೊದಲೇ ಅಂದಂತೆ ಇನ್ನೆರಡು ವಾರಗಳಲ್ಲಿ ಆರೋಗ್ಯ ಹೊಂದುತ್ತಾರೆ. ದೇವರ ಅಭಿಪ್ರಾಯಕ್ಕೆ ವಿರೋಧವಾಗಿ ಹೋಗಲು ಯಾರಿಗೆ ಸಾಧ್ಯ".

"ನೀವು ಏನು ಹೇಳಿದರೂ ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಆದದ್ದು ಆಗಿಹೋಯಿತು. ನಿಮ್ಮ ಯಜಮಾನರಿಗೆ ಪೂರ್ಣ ಆರೋಗ್ಯ ಲಭಿಸಿದಮೇಲೆ ನನ್ನ ಒಂದು ಪ್ರಾರ್ಥನೆಯನ್ನು ದಯವಿಟ್ಟು ತಿಳಿಸಬೇಕು".

"ಏನು ಅದು"?

"ನನ್ನ ಪುಸ್ತಕದ ವಿಚಾರ ಮರೆತು ಬಿಡಬೇಕೆಂದು. ಇನ್ನೆರಡು ದಿನ ಇಲ್ಲಿದ್ದು ಟಾನಸ್ಲೇಯವರ ದೇಹಸ್ಥಿತಿ ಉತ್ತಮಗೊಂಡದ್ದನ್ನು ನೋಡಿ ಕೊಂಡು ಊರಿಗೆ ಹೊರಡುತ್ತೇನೆ. ಶರ್ಮರಿಂದ ಗ್ರಂಥ ಹಿಂದಿರುಗಿ ಬಂದರೆ ಅಂಚೆಯ ಮೂಲಕ ನನಗೆ ಕಳುಹಿಸಲಿ. ನನ್ನ ವಿಷಯದಲ್ಲಿ ಇಷ್ಟು ಆಸಕ್ತಿ ವಹಿಸಿದ್ದಕ್ಕೆ ನಾನು ನಿಮ್ಮಿಬ್ಬರಿಗೂ ಚಿರಋಣಿ".

"ದಯವಿಟ್ಟು ಹಾಗೆ ಅನ್ನಬೇಡಿ. ಪುಸ್ತಕ ಪ್ರಕಟಿಸುವುದರಿಂದ ನಿಮಗೊಬ್ಬರಿಗೇ ಉಪಕಾರವಲ್ಲ. ನಮ್ಮ ಸಂಗದ ಕೆಲಸಗಳಲ್ಲಿ ಅದೂ ಒಂದು. ನಮ್ಮ ಕೆಲಸಕ್ಕೆ ನಿಮ್ಮಿಂದ ಸಹಾಯವಾದಂತಾಯಿತು. ನಾವು ವ್ಯಾಪಾರಿಗಲು. ನಮಗೆ ಪ್ರಯೋಜನ ಕಾಣದ ಕೆಲಸಕ್ಕೆ ಕೈಹಾಕುವುದಿಲ್ಲ. ಈಗ ನೀವು ಊರಿಗೆ ಹೋಗಲೇಬೇಕಿದ್ದರೆ ಹೋಗಿಬನ್ನಿ. ಹೆಂಡ್ರಿಕ್ಸಿಗೆ ಗುಣವಾಗುತ್ತಲೇ ಕಾಗದ ಬರೆಸುತ್ತೇನೆ. ಆಗ ಬಂಗು, ಪ್ರಾರಂಬಿಸಿದ ಕೆಲಸ ಪೂರೈಸುವಿರಂತೆ. ಏನು ಯಜಮಾನರೇ ನನ್ನ ಮಾತು ಸರಿಯೇ"?

"ಈಗ ಹೋಗಬೇಕಾದ ಅವಶ್ಯಕತೆ ಏನಮ್ಮ. ನನ್ನ ಸೊಸೆಯನ್ನು ನೋಡಬೇಕೆಂದು ನನಗೂ ಅಭಿಲಾಷೆ. ಅಲ್ಲಿಗೆ ಕಾಗದ ಬರೆದು ಆಕೆಯ ನ್ನೂ ಕರೆಸುತ್ತೇನೆ. ಬಂದ ಕೆಲಸ ಪೂರೈಸಿಕೊಂಡು ಹೊರಡಲಿ. ಈತನ

ಶಿಷ್ಯರಿಗೂ ಒಂದು ತಿಂಗಳು ವಿರಾಮ ಸಿಕ್ಕಿದಂತೆ ಆಯಿತು. ಅವರೇನೋ ಅದಕ್ಕಾಗಿ ಹೆಚ್ಚಿಗೆ ವ್ಯಥೆಪಡುವುದಿಲ್ಲ. ಅಹುದೇನಯ್ಯ"?

"ಹೊರಡುವ ಯೋಚನೆ ಇನ್ನೆರಡು ದಿವಸಗಳಮೇಲಿನದು ತಾನೇ. ಆಗ ಯೋಚನೆ ಮಾಡೋಣ. ನಾವು ದಿನವೂ ಬಂದು ನೋಡಿಕೊಂಡು ಹೋಗಬಹುದೇ"?

"ಅಗತ್ಯವಾಗಿ ಆಗಬಹುದು. ನೀವು ಬಂದರೆ ನನಗೆ ಬಹಾಲ ಸಂತೋಷ. ನೀವು ಯಾವ ಹೊತ್ತಿಗೆ ಬಂದರೂ ಒಲಗೆ ಕರೆದುಕೊಂಡು ಬರುವಂತೆ ಆಲಿಗೆ ತಿಲಿಸಿರುತ್ತೇನೆ".

"ನಾವು ಹೊರಡುತ್ತೇವೆ ತಾಯಿ. ನಮಸ್ಕಾರ" ಎಂದು ಇಬ್ಬರೂ ಹೊರಟರು.

## ೧೬

ಆಸ್ಪತ್ರೆಗೆ ಹೋಗುವ ಮೊದಲೇ ಶಿವರಾಮಯ್ಯನವರ ಮನಸ್ಸು ಬಹಳ ಕದಡಿತ್ತು. ಗಾಯಗೊಂಡು, ದೇಹದಮೇಲೆ ಅರಿವು ಇಲ್ಲದೆ ಮಲಗಿದ್ದ ಕ್ರೈಸ್ತ ಸ್ನೇಹಿತರನ್ನು ನೋಡಿ ಬಂದಮೇಲೆ ಇದೆಲ್ಲಕ್ಕೂ ತಾವೇ ಮೂಲ ಕಾರಣರೆಂದು ನಿಷ್ಕರ್ಷಿಸಿಕೊಂಡರು. ಶರ್ಮರ ಮನೆಗೆ ಇಬ್ಬರೂ ಹೊರ ಟಿದ್ದರೆಂಬುನು ಲಿಲ್ಲಿಯವರ ಮಾತಿನಿಂದ ಧೃಡವಾಯಿತು. ಆದುದರಿಂದ ಅವರ ವಿಚಾರ ಸರಣಿಯ ಪ್ರಕಾರ ಪುಸ್ತಕ ಹಿಂದಕ್ಕೆ ತರಬೇಕಾದ ಆವಶ್ಯಕತೆ ಇಲ್ಲದಿದ್ದಲ್ಲಿ ಅವರು ಹೊರಡುತ್ತಿರಲಿಲ್ಲ. ಅಪಘಾತಕ್ಕೆ ಸಿಕ್ಕುತ್ತಿರಲಿಲ್ಲ. ಹಂಫ್ರೆಯೂ ಶಿವರಾಮಯ್ಯನವರ ಕೆಲಸದಮೇಲೆಯೇ ಹೊರ ಬಿದ್ದರೇ? ಎರಡು ಮೋಟಾರುಗಳೂ ಹೊರಡುವ ಕಾಲ, ವೇಗ, ಚಲಿಸುವ ಮಾರ್ಗ ಎಲ್ಲಾ ತಮ್ಮಿಂದ ಗೊತ್ತುಮಾಡಲ್ಪಟ್ಟಿದ್ದವೇ? ಎಂಬ ಅಂಶಗಳು ಅವರ ತರ್ಕದಲ್ಲಿ ಬರಲೇ ಇಲ್ಲ. ಮಾನವನ ಸ್ವಭಾವವೇ ಹೀಗೆಂದು ಕಾಣುತ್ತದೆ. ತನ್ನ ಚಿಕ್ಕ ಪ್ರಪಂಚದಲ್ಲಿ ನಡೆಯುವ ಪ್ರತಿಯೊಂದು ಒಳ್ಳೆಯ, ಕೆಟ್ಟ ಕೆಲಸಕ್ಕೂ ತಾನೇ ಕಾರಣನೆಂದು ಭ್ರಮಿಸಿ ಮೆರೆಯುವನು; ಇಲ್ಲವೇ ದುಃಖಿಸುವನು.

ಶನಿವಾರ ತಿರುಗಿ ಆಸ್ಪತ್ರೆಗೆ ಹೋಗಿಬಂದರು. ಜಾನಯ್ಯನವರಿಗೆ ಜ್ವರ ಕಡಿಮೆಯಾಗಿ ಹುಚ್ಚು ಹುಚ್ಚಾಗಿ ಮಾತನಾಡುವುದು ನಿಂತಿದ್ದಿತು. ಟಾನಸ್ಲೇಯವರಿಗೂ ಇಹಲೋಕದ ಅರಿವು ಉಂಟಾಗಿದ್ದಿತು. ಸ್ವಲ್ಪ ಜ್ವರವೂ ಇದ್ದಿತು. ಲಿಲ್ಲಿಯವರ ಮುಖವು ಹಿಂದಿನ ದಿನಕ್ಕಿಂತಲೂ ಸ್ವಲ್ಪ ಗೆಲುವಾಗಿದ್ದಿತು. ಮನಸ್ಸಿನಲ್ಲಿಯೇ ದೇವರಿಗೆ ವಂದನೆಗಳನ್ನರ್ಪಿಸಿ ಈರ್ವರಿಗೂ ಈಶನು ಆರೋಗ್ಯಭಾಗ್ಯವನ್ನು ಬೇಗ ಕೊಡಬೇಕೆಂದು ಪ್ರಾರ್ಥಿಸುತ್ತಾ ಶಿವರಾಮಯ್ಯನವರು ಮನೆಗೆ ಬಂದು ಪೂದೋಟದಲ್ಲಿಯ ಕಲ್ಲುಬೆಂಚಿನ ಮೇಲೆ ಕುಳಿತರು. ಚಿಕ್ಕ ಶಿವು ತಾಯಿಯ ಜೊತೆಯಲ್ಲಿ ಎಲ್ಲಿಗೋ ಹೋಗಿದ್ದನು. ಬುದ್ಧಿಗೆ ಬೇರೆ ಕೆಲಸವಿಲ್ಲದೆ ಅವರ ಸ್ವಂತ ಸ್ಥಿತಿಯನ್ನು ವಿಮರ್ಶಿಸಲಾರಂಭಿಸಿದರು. ವಿಜಯಪುರದಲ್ಲಿ ಇನ್ನು ಏನು ಕೆಲಸ? ಪುಸ್ತಕದ ವಿಚಾರದಲ್ಲಿ ಒಂದು ನಿಷ್ಕರ್ಷೆಗೆ ಬರಬೇಕಾದರೆ ಇನ್ನೂ ಹದಿನೈದು ದಿನಗಳಾದರೂ ಬೇಕು. ಪಳ್ಳಿಯಲ್ಲಿ ಹುಡುಗರಿಗೆ ಶಾಲೆ ನಿಂತು ಹೋಗಿದೆ. ಹಳ್ಳಿಯ ಜನಗಳು ಏನೆಂದುಕೊಂಡಾರು. ಪತ್ನಿಗೂ ಬೇಸರವಾಗಿರಬೇಕು. ಎಷ್ಟುದಿವಸ ಆಕೆಯನ್ನು ಅಣ್ಣನ ಮನೆಯಲ್ಲಿ ಬಿಟ್ಟಿರುವುದು. ಇಲ್ಲಿ ಚಿಕ್ಕಪ್ಪನ ಮನೆಯಲ್ಲಿ ತಾನೇ ಎಷ್ಟು ದಿವಸ ಇರುವುದು. ಈ ಎಲ್ಲ ಅಂಶಗಳೂ ತೋರಿಸುವ ದಾರಿ ಒಂದೇ—ಊರಿನ ದಾರಿ.

ವಿಚಾರ ವಾಹಿನಿಯು ಈರೀತಿ ಪ್ರವಹಿಸುತ್ತಿದ್ದಾಗ ನಂಜಪ್ಪನವರು ಒಂದು ಕಾಗದವನ್ನು ಕೈಲಿ ಹಿಡಿದುಕೊಂಡು ಬಂದು "ಏನಯ್ಯಾ, ಆಕಾಶ ತಲೆಯಮೇಲೆ ಬಿದ್ದಹಾಗೆ ಯೋಚಿಸುತ್ತಾ ಕುಳಿತಿರುವೆ? ನಿನ್ನ ಮಿತ್ರರ ದೇಹಸ್ಥಿತಿ ಉತ್ತಮ ತಾನೆ? ಇದೋ ನಿನಗೆ ಒಂದು ಕಾಗದ ಬಂದಿದೆ".

ಮೇಲ್ವಿಳಾಸದ ಹಸ್ತಾಕ್ಷರವನ್ನು ನೋಡುತ್ತಲೇ ಮುಖ ಸ್ವಲ್ಪ ಅರಳಿತು. ಕಾಗದ ಶಾಮಣ್ಣನದು. ಪತ್ನಿಯ ಯೋಗಕ್ಷೇಮ ತಿಳಿಯಲು ಆತುರರಾಗಿ ಕಾಗದ ಒಡೆದು ಓದಿಕೊಂಡು ತಿರುಗಿ ಮಡಿಸಿ ಲಕ್ಕೋಟಿಗೆ ಹಾಕಿದರು. ನಂಜಪ್ಪನವರು "ಏನು ಸಮಾಚಾರ, ಕಾಗದ ಯಾರದ್ದು"? ಎಂದು ಕುತೂಹಲದಿಂದ ಪ್ರಶ್ನೆಮಾಡಿದರು.

"ಶಾಮು ಬರೆದಿದ್ದಾನೆ. ಎಲ್ಲಾ ಆರೋಗ್ಯವಂತೆ. ನಿಮ್ಮ ಸೊಸೆ ನಿಮಗೂ ಚಿಕ್ಕಮ್ಮನಿಗೂ ನಮಸ್ಕಾರತಿಳಿಸಲು ಹೇಳಿದ್ದಾಳೆ. ಸಾಧ್ಯವಾದಷ್ಟು ಜಾಗ್ರತೆ ಹಿಂತಿರುಗಬೇಕಂತೆ. ನಿಮ್ಮೆಲ್ಲರನ್ನೂ ಎರಡು ದಿನಗಳ ಮಟ್ಟಿಗಾದರೂ ಖಂಡಿತ ಕರೆದುಕೊಂಡು ಬರಬೇಕಂತೆ. ಚಿಕ್ಕ ಶಿವೂನ ನೋಡಲು ಬಹಳ ಕುತೂಹಲ ಎಂದು ಕಾಣುತ್ತೆ! ನಾನು ಈಗ ಹೊರಡುವ ಯೋಚನೆಯನ್ನೇ ಮಾಡುತ್ತಿದ್ದೆ. ನಾಳೆ ಹೊರಡೋಣವೆಂದಿದ್ದೇನೆ".

"ಅಲ್ಲಯ್ಯಾ, ಬಂದ ಕೆಲಸ 'ಕಾಯೋ-ಹಣ್ಣೋ' ತಿಳಿದುಕೊಂಡು ಹೋಗುವುದನ್ನುಬಿಟ್ಟು ಅರ್ಧದಲ್ಲಿ ಬಿಟ್ಟುಹೋಗುತ್ತಾರೆಯೇ? ಇನ್ನೊಂದು ವಾರ ನಿಧಾನಿಸು. ಸ್ವಲ್ಪಮಟ್ಟಿಗೆ ಟಾನಸ್ಲೇಯವರಿಗೆ ಗುಣಕಂಡುಬರುತ್ತಲೆ ಈ ವಿಚಾರ ಪ್ರಸ್ತಾಪಿಸೋಣ".

"ಅವರು ನರಳುತ್ತಾ ಮಲಗಿರುವಾಗ ಈ ಸಣ್ಣವಿಚಾರ ಚರ್ಚಿಸಲು ನನಗೆ ಇಷ್ಟವಿಲ್ಲ. ಅಲ್ಲದೆ ನನ್ನ ಪುಸ್ತಕ ಅವರ ಮುದ್ರಣಾಲಯದಲ್ಲಿ ಅಚ್ಚಾಗುವ ಸಂಭವವೂ ಇಲ್ಲವೆಂದೇ ನನ್ನ ಭಾವನೆ".

"ಅದೇಕೆ"?

"ದೇವರು ಯಾವಾಗಲೂ ಮುಂದೆ ಆಗುವ ವಿಷಯಗಳಿಗೆ ಸೂಚನೆಗಳನ್ನು ತೋರಿಸುತ್ತಾನೆ. ಮಳೆ ಬರುವುದಕ್ಕೆ ಮುಂಚೆ ಆಕಾಶವನ್ನು ಮೋಡಗಳು ಮುಚ್ಚುತ್ತವೆ. ಸಾವು ಬರುವುದಕ್ಕೆ ಮುಂಚೆ ರೋಗ ಬರುತ್ತದೆ. ಇಂದಾಗುವುದು ಮುಂದಾಗುವುದರ ಕುರುಹು. ನನ್ನ ಕೈಹಿಡಿದು ಸಹಾಯಮಾಡಲು ಬಂದವರಿಗೆ ಆದ ಗತಿಯನ್ನು ನೋಡಿದರೆ ಗ್ರಂಥ ವಿಮರ್ಶೆಯ ಪರಿಣಾಮವೇನೆಂಬುದನ್ನು ಸುಲಭವಾಗಿ ಹೇಳಬಹುದಲ್ಲವೆ"?

"ಬಿಡಯ್ಯ, ನೀನಂತೂ ಯಾವಾಗಲೂ ಕೆಟ್ಟದನ್ನೇ ಯೋಚಿಸುತ್ತಿ. ನಿನ್ನ ವಾದ ಸರಿ ಎಂದು ಒಪ್ಪಿಕೊಂಡರೆ ತಾಯಿಗೆ ಅನಿರ್ವಚನೀಯವಾದ ನೋವನ್ನು ಕೊಟ್ಟು ಹುಟ್ಟುವ ಪ್ರತಿಯೊಂದು ಶಿಶುವೂ ಜೀವವಿಲ್ಲದ್ದಾಗಿರಬೇಕು; ಇಲ್ಲವೇ ಲೋಕಕ್ಕೆ ಕಂಟಕವಾಗಿರಬೇಕು. ಈ ಅನುಮಾನವೇಕೆ?

ನೀನೇ ಹೋಗಿ ಶರ್ಮರನ್ನು ವಿಚಾರಿಸು".

"ಹಾಗೆ ಮಾಡುವುದು ಅನುಚಿತವೆಂದು ನನ್ನ ಅಭಿಪ್ರಾಯ. ವಿಮರ್ಶೆಗೆ ಕೊಟ್ಟಿರುವವರು ಮುದ್ರಣಾಲಯದವರು. ಗುಣಾವಗುಣಗಳನ್ನು ಅವರಿಗೆ ತಿಳಿಸಬೇಕೇ ಹೊರತು ನನಗಲ್ಲ. ಒಂದು ವೇಳೆ ಹಾಗೆ ಹೋಗಿ ಕೇಳಿದರೆ ಶರ್ಮರು ಇದನ್ನು ನನಗೆ ತಿಳಿಯಹೇಳಿದರೆ ಮುಖಕ್ಕೆ ತಣ್ಣೀರೆರಚಿದಂತಾಗುವುದಿಲ್ಲವೇ? ಹಾಗಲ್ಲದೆ ದೊಡ್ಡ ಮನಸ್ಸು ಮಾಡಿ ಗ್ರಂಥದ ವಿಚಾರದಲ್ಲಿ ಅವರ ಅಭಿಪ್ರಾಯವೇನೆಂಬುದನ್ನು ಹೇಳುವರೆಂದು ಇಟ್ಟುಕೊಳ್ಳೋಣ. ನಿಮ್ಮ ನಿರೀಕ್ಷೆಯಂತೆ ಗ್ರಂಥ ಚೆನ್ನಾಗಿಯೇ ಇದೆಯೆಂದು ಅವರು ಅಭಿಪ್ರಾಯಪಡುವರೆಂದೂ ಇಟ್ಟುಕೊಳ್ಳೋಣ. ಅಚ್ಚು ಹಾಕಿಸುವವರು ಆಸ್ಪತ್ರೆಯಲ್ಲಿರುವಾಗ ಮುಂಗಲ ಕೆಲಸಗಳೇನಾದರೂ ಆಗುವುವೇ? ನನ್ನ ನಿರೀಕ್ಷೆಯಂತೆ ಪುಸ್ತಕ ಶರ್ಮರು ನಿರೀಕ್ಷಿಸುವ ಮಟ್ಟಕ್ಕೆ ಬಾರದಿದ್ದಲ್ಲಿ ಆ ಅಭಿಪ್ರಾಯ ಅವರು ನನಗೆ ತಿಳಿಸುವರೇ"?

"ನಾನು ಹೇಳುವ ಪ್ರತಿಯೊಂದಕ್ಕೂ ನೀನು ಒಂದು ಕೊಕ್ಕೆಯನ್ನು ಹಾಕುತ್ತೀ. ನೀನು ಹೇಳುವುದು ತಪ್ಪು ಎಂದಲ್ಲ. ಅದು ಒಂದು ತರದ ಯೋಚನೆ. ನನ್ನದು ಬೇರೊಂದು ತರದ ಯೋಚನೆ. ನೀನು ಮುಂದೆ ಬರಬಹುದೆಂದು ತರ್ಕಿಸುವ ಅನಿಷ್ಟವು ಸಂಭವಿಸುವುದು ಎಷ್ಟರಮಟ್ಟಿಗೆ ಸಾಧ್ಯವೋ, ನೀನು ತರ್ಕಿಸುವ ಇಷ್ಟವು ಕೈಗೂಡುವುದೂ ಅಷ್ಟರ ಮಟ್ಟಿಗೆ ಸಾಧ್ಯ. ಆದರೆ ಫಲಿತಾಂಶ ತಿಳಿಯುವವರೆಗೂ ನಿನ್ನ ನಿರೀಕ್ಷಣೆಯು ನಿನ್ನನ್ನು ದುಃಖಿಯನ್ನಾಗಿ ಮಾಡುತ್ತದೆ. ನಾನಾದರೋ ಅಲ್ಲಿಯವರೆಗಾದರೂ ಸುಖಿಯಾಗಿರುತ್ತೇನೆ. ಅಲ್ಲವೇನಯ್ಯ? ಹೋಗಲಿ, ನೀನು ಹೋಗಲು ಇಷ್ಟಪಡದಿದ್ದರೆ ನಾನೇ ಹೋಗಿ ಬರಲೇ"?

"ನೀವು ನನ್ನ ಹಿತಚಿಂತಕರು. ನನಗೆ ಒಳ್ಳೆಯದನ್ನು ಮಾಡಬೇಕೆಂದೇ ನಿಮ್ಮ ಅಭಿಪ್ರಾಯ. ಆ ಅಭಿಮಾನದಿಂದ ಸಾಧಕವಮಾತ್ರ ನಿಮಗೆ ಕಾಣುತ್ತದೆ, ಬಾಧಕ ಕಾಣುವುದಿಲ್ಲ. ರಾಮು ಈದಿನ ಮನೆಗೆ ಬರಲಿ. ಅವನಲ್ಲಿ ಆಲೋಚನೆ ಮಾಡೋಣ. ಲೌಕಿಕ ನನಗಿಂತ ಅವನಿಗೆ ಚೆನ್ನಾಗಿ ಗೊತ್ತು. ಆಗಬಹುದೇ"?

"ಹಾಗೇ ಆಗಲಿ ಬಾ. ಇಲ್ಲಿ ಒಬ್ಬನೇ ಕುಳಿತುಕೊಂಡು ಏನು ಮಾಡುತ್ತೀ? ಹಾಗೆ ಬೆಟ್ಟದ ಕಡೆ ನೋಡಿಕೊಂಡು ಬರೋಣ".

ಮನೆಗೆ ಹಿಂತಿರುಗುವುದು ಸ್ವಲ್ಪ ಹೊತ್ತು ಆಯಿತು. ರಾಮು ಸ್ವಾಮಿಯು ಮನೆಗೆ ಬಂದು ಇವರ ಬರವನ್ನೇ ನಿರೀಕ್ಷಿಸುತ್ತಿದ್ದನು. ತಂದೆ ಯನ್ನು ಬಿಟ್ಟು ಮಗನಾಗಲಿ, ಮಗನನ್ನು ಬಿಟ್ಟು ತಂದೆಯಾಗಲಿ, ಊಟ ಮಾಡುತ್ತಿದ್ದುದು ಅತಿ ವಿರಳ. ಮಗನು ಕಛೇರಿಯಿಂದ ಬರುವುದು ಎಷ್ಟು ಹೊತ್ತಾಗಲೀ, ಎಂತಹ ಮಳೆ ಛಳಿಯ ದಿನವಾಗಿರಲಿ, ನಂಜಪ್ಪನವರು ಮಗನನ್ನು ಬಿಟ್ಟು ಊಟಮಾಡಿದ ದಿನವಿರಲಿಲ್ಲ. ರಾಮುಸ್ವಾಮಿಗೂ ತಂದೆಯು ಪಂಕ್ತಿಯಲ್ಲಿ ಕುಳ್ಳಿರದಿದ್ದರೆ ಅನ್ನ ಗಂಟಲೊಳಗೆ ಇಳಿಯುವುದು ಕಷ್ಟವಾಗುತ್ತಿತ್ತು. ಪತ್ರಿಕೆಯಲ್ಲಿ ಬಂದಿದ್ದ ವರ್ತಮಾನಗಳು ಕಛೇರಿಯಲ್ಲಿ ನಡೆದ ಹೆಚ್ಚಿನ ಸಂಗತಿಗಳು, ನಂಜಪ್ಪನವರು ತಮ್ಮ ಸಂಚಾರಗಳಲ್ಲಿ ಸಂಗ್ರ ಹಿಸಿದ ಬಾತ್ಮಿಗಳು, ಗೌರಮ್ಮನವರು ಭಾಗವಹಿಸಿದ್ದ ಚಿಕ್ಕಪುಟ್ಟ ಸ್ತ್ರೀ ಸಮ್ಮೇಳನಗಳಲ್ಲಿ ಟೀಕಿಸಲ್ಪಟ್ಟ ಗೃಹಚ್ಛಿದ್ರಗಳು, ಪುಟ್ಟ ಶಿಶು ಹೊಸದಾಗ ಆಡಿತೋರಿಸಿದ ಆಟ, ನುಡಿದು ನಲಿಸಿದ ನುಡಿ, ಎಲ್ಲವೂ ರಾತ್ರಿಯ ಭೋಜನ ವೇಳೆಯಲ್ಲಿ ಸಂಭಾಷಣೆಯ ವಿಷಯಗಳಾಗಿರುತ್ತಿದ್ದುವು. ಆದರೆ ಇಂದು ಶಿವರಾಮಯ್ಯನವರು ಹೊರಡುವ ವಿಚಾರ ಮುಖ್ಯವಸ್ತುವಾಗಿ ಬಾಕಿ ವಿಷಯಗಳಿಗೆ ಅವಕಾಶ ದೊರೆಯದೆ ಹೋಯಿತು. ಹೊರಡಲೇಬೇಕೆಂದು ಶಿವರಾಮಯ್ಯನವರು ತಮ್ಮ ವಾದವನ್ನು ಮುಂದಿಟ್ಟು ಅದರ ಸಮರ್ಥನೆಗೆ ಬೇಕಾದ ಎಲ್ಲ ಅಂಶಗಳನ್ನೂ, ವಕೀಲನು ನ್ಯಾಯಾಧಿಪತಿಯ ಮುಂದೆ ತನ್ನ ಕಕ್ಷಿಯ ಪರ ವಾದಿಸುವಂತೆ, ರಾಮುಸ್ವಾಮಿಯ ಮುಂದೆ ವಾದಿಸ ಬೇಕಾಯಿತು. ಈ ವಾದವನ್ನು ಎದುರಿಸಲು ನಂಜಪ್ಪನವರು ಮಗನ ಮುಂದೆ ತಮ್ಮ ಚಾತುರ್ಯವನ್ನೆಲ್ಲಾ ತೋರಿಸಿದರು. ನಂಜಪ್ಪನವರಿಗೆ ಗೌರಮ್ಮನವರ ಬೆಂಬಲ ದೊರೆಯಿತು. ಜೊತೆಗೆ ಆಗಾಗ ಸರಸ್ವತಮ್ಮನೂ ತನ್ನ ಮೆಲು ದನಿಯನ್ನು ಅತ್ತೆ ಮಾವಂದಿರ ಸಹಾಯಕ್ಕೆ ಕಳುಹಿಸಿದಳು. ಪಾಪ, ಶಿವರಾಮಯ್ಯನವರು ಏಕಾಕಿಯಾಗಿ ವಾದಿಸಬೇಕಾಯಿತು. ಮಜ್ಜಿಗೆ ಅನ್ನ ಊಟಮಾಡುವ ಹೊತ್ತಿಗೆ ಎರಡುಕಡೆಯವರೂ ರಾಮುಸ್ವಾಮಿಯ ತೀರ್ಪನ್ನು ಉತ್ಸುಕತೆಯಿಂದ ಎದುರು ನೋಡುತ್ತಿದ್ದರು.

ಆಪೋಶನ ತೆಗೆದುಕೊಳ್ಳಲು ರಾಮಸ್ವಾಮಿಯು ಕೈಗೆ ನೀರನ್ನು ಹಾಕಿಕೊಳ್ಳುತ್ತಾ "ಶಿವಣ್ಣ ಇಲ್ಲಿಂದ ಹೊರಡಲು ಎರಡು ಪ್ರಬಲ ಕಾರಣಗಳನ್ನು ಹೇಳಿದ್ದಾನೆ. ಮೊದಲನೆಯದು ಅವನ ಪ್ರಿಯ ವಿದ್ಯಾರ್ಥಿಗಳಿಗೆ ಪಾಠ ತಪ್ಪಿಹೋಗಿದೆ ಎನ್ನುವುದು. ಎರಡನೆಯದು ಅವನಿಗೆ ಈಗ ಇಲ್ಲಿ ಏನೂ ಕೆಲಸವಿಲ್ಲ ಎನ್ನುವುದು. ಶಾಲೆ ಪ್ರಾರಂಭ ಮಾಡಿದಂದಿನಿಂದ ಇಂದಿನವರೆಗೂ ಶಿವಣ್ಣ ವಿದ್ಯಾರ್ಥಿಗಳಿಗೆ ಹೆಚ್ಚುಕಾಲ ರಜ ಕೊಟ್ಟಿರುವ ಹಾಗೆ ಕಾಣುವುದಿಲ್ಲ. ಈಗ ಒಂದು ಹದಿನೈದು ದಿನಗಳ ರಜ ಅವರಿಗೆ ಕೊಡುವುದರಿಂದ ವಿದ್ಯಾರ್ಥಿಗಳಿಗೂ ಉಪಾಧ್ಯಾಯರಿಗೂ ಉಪಯೋಗವೆಂದೇ ನನ್ನ ಅಭಿಪ್ರಾಯ. ಅದಕ್ಕಾಗಿಯೇ ಎಲ್ಲಾ ಸರ್ಕಾರೀ ಶಾಲೆಗಳಲ್ಲಿಯೂ ವರ್ಷ ವರ್ಷವೂ ದೀರ್ಘಕಾಲ ರಜ ಕೊಡುತ್ತಾರೆ. ಎರಡನೆಯ ಕಾರಣಕ್ಕೆ ನಾನು ಹೇಳುವುದು—ಇದುವರೆಗೂ ಕೆಲಸಮಾಡಿ ಈಗ ಶಿವಣ್ಣನಿಗೂ ಸ್ವಲ್ಪ ವಿಶ್ರಾಂತಿ ಅವಶ್ಯಕವಾಗಿದೆ. ಹಾಗೆ ಅವನು ಕೆಲಸ ಮಾಡಲೇಬೇಕೆಂದಿದ್ದರೆ, ಈಗ ಕಛೇರಿಯಲ್ಲಿ ಸ್ವಲ್ಪ ಹೆಚ್ಚು ಕೆಲಸ ನನ್ನ ಪಾಲಿಗೆ ಬಂದಿದೆ. ಮಹಾರಾಜರ ಸ್ವಂತ ಮುದ್ರಣಾಲಯದಲ್ಲಿ ಒಂದು ಗ್ರಂಥವನ್ನು ಅತಿ ಶೀಘ್ರದಲ್ಲಿ ಅಚ್ಚು ಹಾಕಬೇಕಾಗಿದೆ. ಮೊಳೆ ಜೋಡಿಸುವವರು ಮೊದಲೇ ಅವಿದ್ಯಾವಂತರು. ಕೆಲವರಂತೂ ಈ ಕೆಲಸಕ್ಕೋಸ್ಕರ ಹೊಸದಾಗಿ ನೇಮಿಸಿಕೊಂಡಿರುವವರು. ಅವರು ದಿನ ದಿನವೂ ಜೋಡಿಸಿದ ಭಾಗ ಸರಿಯಾಗಿದೆಯೇ? ಇಲ್ಲವೇ? ಎಂಬುದನ್ನು ಪರಿಶೀಲಿಸುವ ಕೆಲಸವನ್ನು ನನಗೆ ಒಪ್ಪಿಸಿದ್ದಾರೆ ಸಾಧ್ಯವಾದಷ್ಟನ್ನು ಕಛೇರಿಯಲ್ಲೇ ಮುಗಿಸಿ ಉಳಿದುದನ್ನು ಮನೆಗೆ ತಂದು ರಾತ್ರಿ ನೋಡಬೇಕಾಗಿದೆ. ಶಿವಣ್ಣ ಇದರಲ್ಲಿ ನನಗೆ ಸಹಾಯ ಮಾಡಿದರೆ ನನ್ನ ಕೆಲಸ ಸುಲಭವಾಗಿಯೂ ಸಮರ್ಪಕವಾಗಿಯೂ ನೆರವೇರುತ್ತದೆ. ಆದುದರಿಂದ ನಾನು ಕೊಡುವ ತೊಂದರೆಯನ್ನು ಅವನು ವಹಿಸಲು ಸಿದ್ಧನಾಗಿದ್ದರೆ ಇಲ್ಲಿ ಬೇಕಾದಷ್ಟು ಕೆಲಸವಿದೆ. ಏನು ಶಿವಣ್ಣ, ನನಗೆ ಸಹಾಯ ಮಾಡುತ್ತೀಯೋ? ಊರಿಗೆ ಹೊರಡುತ್ತೀಯೋ?" ಎಂದನು.

"ಒಳ್ಳೇ ನ್ಯಾಯಾಧಿಪತಿ ಕಣಯ್ಯ ನೀನು. ಪೂಜ್ಯರಾದ ತಂದೆ ತಾಯಿಗಳು, ಪ್ರೀತಿಪಾತ್ರಳಾದ ಹೆಂಡತಿ ವಾದಿಸಿದವರೆಂದು ತೀರ್ಪನ್ನು ಅವರ

ಕಡೆಗೆ ವಾಲಿಸುತ್ತಿದ್ದಿ. ನೀನು ಹೀಗೆ ಮಾಡುತ್ತೀ ಎಂದು ತಿಳಿದಿದ್ದರೆ ಪ್ರಯತ್ನಪಟ್ಟು ಸರಸ್ವತೀದೇವಿ ನನ್ನ ಸಹಾಯಕ್ಕೆ ಬರುವಂತೆ ಮಾಡಿ ಕೊಳ್ಳುತ್ತಿದ್ದೆ".

"ನಿನ್ನ ಲೋಕಾನುಭವದಲ್ಲಿ ಜಯವನ್ನು ಪಡೆಯಲು ಶಾರದೆಗಿಂತಲೂ ಲಕ್ಷ್ಮಿಯೇ ಸಮರ್ಥಳೆಂಬುದು ಗೊತ್ತಿಲ್ಲವೇನಣ್ಣ. ತಮಾಷೆ ಹಾಗಿರಲಿ. ಊಟವಾದಮೇಲೆ ನನ್ನ ಕೊಠಡಿಗೆ ಹೋಗೋಣ. ನಾನು ಹೇಳಿದ ಕೆಲಸದ ವಿಚಾರ ನಿಜವಾಗಿದ್ದರೆ ಇನ್ನೆರಡುದಿನ ಇರು. ಇಲ್ಲದಿದ್ದರೆ ನಾಳೆ ಬೆಳಿಗ್ಗೆಯೇ ಹೊರಡು. ಆಗಬಹುದೇ? ತೀರ್ಪನ್ನು ನಿನಗೇ ಬಿಟ್ಟಿದ್ದೇನೆ".

ಊಟ ಮುಗಿಯಿತು. ಪದ್ಧತಿಯಪ್ರಕಾರ ನಂಜಪ್ಪನವರು ಕುಟ್ಟಣಿ ಯನ್ನು ತೆಗೆದುಕೊಂಡು ಅಡಕೆಲೆ ಕುಟ್ಟಲಾರಂಭಿಸಿದರು. ಶಿವರಾಮಯ್ಯ ನವರೂ ಎಲೆಯನ್ನು ಮಡಿಸಿ ಹಾಕಿಕೊಳ್ಳುತ್ತಾ ಚಿಕ್ಕ ಶಿವೂಗೆ ಅಡಿಕೇ ಪುಡಿಯಲ್ಲಿಯ ಸಕ್ಕರೆ, ಕೊಬ್ಬರೀಚೂರು ಆರಿಸಿಕೊಡುತ್ತಿದ್ದರು. ಗೌರಮ್ಮ ನವರು "ನೋಡು ಶಿವು ನಿನ್ನ ದೊಡ್ಡಪ್ಪ ನಿನ್ನನ್ನು ಬಿಟ್ಟು ಬಿಟ್ಟು ನಾಳೆ ಊರಿಗೆ ಹೋಗುತ್ತಾರಂತೆ" ಎಂದರು.

"ಹೋ, ಹೋಗೋಕೆ ನಾ ಬಿಟ್ಟರಲ್ಲವೇ".

"ಬಿಡದೇ ಏನು ಮಾಡುತ್ತೀಯಪ್ಪಾ"?

"ದೊಡ್ಡಪ್ಪನ ಪಂಚೇ ಶಾಲು ಎಲ್ಲಾ ತೆಗೆದು ಒಂದುಬಳೀ ಮುಚ್ಚಿಡ್ತೀನಿ. ಆಗ"?

"ಹಾಗೆಲ್ಲಾ ಮಾಡಬೇಡಪ್ಪ, ದೊಡ್ಡಮ್ಮನ್ನ ಕರಕೊಂಡು ಇನ್ನೊಂದು ಸಲ ಬರುತ್ತೀನಿ. ದೊಡ್ಡಮ್ಮ ನಿನಗೆ ತುಂಬಾ ತಿಂಡೀ ಮಾಡಿಕೊಂಡು ಬರುತ್ತಾಳೆ. ಏನೇನು ತಿಂಡಿ ಮಾಡಿಸಿಕೊಂಡು ಬರಲಿ, ಹೇಳು"?

"ಹಾಗಾದರೆ ನಾನೂ ನಿನ್ನ ಜೊತೇಲೇ ಬರ್ತೀನಿ. ಅಮ್ಮಾ, ನನ್ನ ಷರಾಯಿ ಅಂಗೀ ಎಲ್ಲಾ ಕೊಡು. ದೊಡ್ಡಪ್ಪನ ಗಂಟಿಗೆ ಕಟ್ತೀನಿ. ನನ್ನ ಬಟ್ಟೆ ಎಲ್ಲಾ ಕೊಟ್ಬಿಡು".

"ಅಲ್ಲವೋ, ನಮ್ಮನ್ನೆಲ್ಲಾ ಬಿಟ್ಟು ದೊಡ್ಡಪ್ಪನ ಊರಿಗೆ ಹೊರಟು ಹೋಗುತ್ತೀಯಾ? ಹಾಗೇ ಮಾಡು ನೀನು ಹೊರಟು ಹೋಗುತ್ತಲೂ ನಾವೆಲ್ಲಾ ಮೈಸೂರುಪಾಕು, ಚಕ್ಕುಲಿ ಎಲ್ಲಾ ಮಾಡಿಕೊಂಡು ತಿನ್ನುತ್ತೇವೆ ನಿಂಗೇ ಇಲ್ಲಾ".

"ಎಲ್ಲಾ ಸುಳ್ಳೇ, ಹೌದೇನಮ್ಮ, ನಿಜವಾಗಿಯೂ ಮಾಡ್ತೀಯಾ"?

"ಮಾಡದೇ ಉಂಟೇ. ದೊಡ್ಡ ಯಜಮಾನ ನೀನು ಹೊರಟು ಹೋದೆ ಎಂತ ನಾವು ತಿಂಡೀ ತಿನ್ನೋದು ಬಿಡೋಕ್ಕಾಗುತ್ತೆಯೋ? ನಿನ್ನ ಪಾಲಿನ ಮೈಸೂರುಪಾಕು ನನಗೆ ಆಯ್ತು. ಚಕ್ಕುಲಿ ನಿಮ್ಮಜ್ಜಿಗೆ ಆಯ್ತು".

ತಲೆಯನ್ನು ಅಲ್ಲಾಡಿಸುತ್ತಾ ಅರ್ಧ ಅಳುವಿನ ನಗುವಿನೊಡನೆ "ತಿನ್ನದೇ ಏನು ಮಾಡುತ್ತೀಯಾ. ನೀನು ಮಾಡಿ ಡಬ್ಬಕ್ಕೆ ತುಂಬುವ ಹೊತ್ತಿಗೆ ನಾನು ದೊಡ್ಡಮ್ಮ ದೊಡ್ಡಪ್ಪ ಎಲ್ಲಾ ಬಂದು ಬಿಡ್ತೀವಿ; ಆಗ ನಿನ್ನ ಪಾಲಿನಲ್ಲಿ ದೊಡ್ಡಪ್ಪನಿಗೂ ದೊಡ್ಡಮ್ಮನಿಗೂ ಕೊಡಬೇಕಾಗುತ್ತೆ. ನಿಂಗೇ ಚಕ್ಕರ್. ನಾನು ಬೇಗ ಬಟ್ಟೇ ತರ್ತೀನಿ" ಎಂದು ಹೇಳುತ್ತಾ ಶಿವು ಒಳಗೆ ಓಡಿದನು.

"ನೋಡಿದೆಯಾ, ಶಿವಣ್ಣ, ಮಗು ನಿನ್ನನ್ನು ಎಷ್ಟು ಹಚ್ಚಿಕೊಂಡಿದೆ. ಇದನ್ನು ಬಿಟ್ಟು ಹೇಗಯ್ಯ ಹೋಗ್ತೀನಿ ಅಂತೀಯಾ. ಲಕ್ಷ್ಮೀದೇವೀನೇ ಇಲ್ಲಿಗೆ ಕರಸು. ಲಿಲ್ಲಿಯವರಿಗೂ ತೋರಿಸಬಹುದು. ಮನುಷ್ಯಪ್ರಯತ್ನ ಮಾಡಿ ನೋಡೋಣ. ನೀನೇನು ಕಳೆದುಕೊಳ್ಳುವುದು? ನಿನ್ನ ಭಾವನಿಗು ನನಿಗೆ ನಾಳೆಯೇ ಕಾಗದ ಬರಿ" ಎಂದು ಹೇಳುತ್ತಾ ನಂಜಪ್ಪನವರು ಅಡಕೆಲೆಯ ಚರಟವನ್ನು ಉಗುಳಲು ಎದ್ದರು.

ಗೌರಮ್ಮನವರು "ನೋಡಪ್ಪ ನೀನು ಬರುವುದೇ ಅಪೂರ್ವ. ಏನೋ ಅಕಸ್ಮಾತ್ತು ಬಂದಿದೀಯೆ. ಲಕ್ಷ್ಮಿಯನ್ನೂ ಎರಡು ದಿವಸ ಕರೆಸು. ದೊಡ್ಡವರ ಮಾತು ಕೇಳು" ಎಂದರು.

ರಾಮಸ್ವಾಮಿಯು "ಈಗಾಗಲೇ ಅಣ್ಣ ಎಲ್ಲಿ ಹೊರಟನಮ್ಮ. ಈಗ ನನಗೆ ಅವನ ಸಹಾಯ ಬೇಕಾಗಿದೆ. ಬಾ ಶಿವಣ್ಣ ನನ್ನ ಕೆಲಸ ಸ್ವಲ್ಪ ನೋಡುವಿಯಂತೆ" ಎಂದು ಹೇಳುತ್ತಾ ತನ್ನ ಕೊಠಡಿಗೆ ಶಿವರಾಮಯ್ಯನವರನ್ನು ಕರೆಗುಕೊಂಡು ಹೊರಟನು.

ಕೊಠಡಿಗೆ ಬರುತ್ತಲೇ "ಈ ಕೆಲಸ ಬಹಳ ಮುಖ್ಯವಾದವದ್ದು. ಮಹಾರಾಜರು ಸ್ವತಃ ಗ್ರಂಥಮುದ್ರಣಕ್ಕೆ ಅಪ್ಪಣೆ ಕೊಡಿಸಿದ್ದಾರೆ. ಇನ್ನು ಒಂದು ವಾರದೊಳಗೆ ಅಂದವಾಗಿ ತಪ್ಪಿಲ್ಲದಂತೆ ಉತ್ತಮ ತರಹ ಕಾಗದದ ಮೇಲೆ ಮುದ್ರಣವಾಗಬೇಕೆಂದು ಮಹಾರಾಜರ ಅಭಿಲಾಷೆ. ಅದಕ್ಕಾಗಿ ಮೊಳೆ ಜೋಡಿಸಿರುವುದು ಸರಿಯಾಗಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಲು ಮೇಲ್ವಿಚಾರಕರು ನನ್ನನ್ನು ಆರಿಸಿಕೊಂಡಿದ್ದಾರೆ. ಇದಕ್ಕೆ ನನಗೆ ಯಾವ ವಿಶೇಷರೀತಿಯ ಅರ್ಹತೆ ಇದೆಯೋ ನಾನು ಕಾಣೆ. ಸಮರ್ಪಕವಾಗಿ ನಿಯಮಿತ ಕಾಲದಲ್ಲಿ ಮುದ್ರಣಕೆಲಸ ಮಾಡಿದರೆ ಅದಕ್ಕೆ ಸಹಾಯಕರಾದವರಿಗೆಲ್ಲ ಅವರವರ ಯೋಗ್ಯತಾನುಸಾರ ಮಹಾಸ್ವಾಮಿಗಳಿಂದ ಬಹುಮಾನ ಬರುವ ಸಂಭವವೂ ಉಂಟೆಂದು ಎಲ್ಲರಿಗು ಹೇಳಿ ಕೆಲಸ ಚೆನ್ನಾಗಿ ಮಾಡಿಸಲು ಅವರು ಬಹಳ ಶ್ರಮಿಸುತ್ತಿದ್ದಾರೆ. ನನಗೆ ಅವರ ಬಹುಮಾನ ಬೇಡ. ಮಾಡಿದ ಕೆಲಸ ನ್ಯೂನತೆಗಳಿಲ್ಲದೆ ಸರಿಯಾಗಿದ್ದರೆ ನನ್ನ ಮನಸ್ಸಿಗೆ ಆಗುವ ಸಮಾಧಾನವೇ ಸಾಕಾದ ಬಹುಮಾನ. ನೀನು ಕನ್ನಡ ಕವಿ. ನಿನಗಿಂತಲೂ ನಿನ್ನ ಕಣ್ಣಿಗೆ ದೋಷಗಳು ಇದ್ದರೆ ಬೇಗ ಕಂಡುಬರುತ್ತವೆ. ನಿನ್ನ ಸಹಾಯ ಎಂತಹ ಸಮಯದಲ್ಲಿ ಸಿಕ್ಕಿತು ನೋಡಿದೆಯಾ! "ಇದು ಇಂದಿನ ಕೆಲಸ" ಎಂದು ಹೇಳುತ್ತಾ ಅಚ್ಚಾದ ಸುಮಾರು ಎಂಟು ಹತ್ತು ಥಾಳಿಗಳನ್ನು ಅವರ ಕೈಗೆ ಕೊಟ್ಟನು.

ತಮ್ಮನ್ನು ಇನ್ನೆರಡು ದಿನ ನಿಲ್ಲಿಸಿಕೊಳ್ಳಲು ತಮ್ಮನು ಈ ಉಪಾಯ ಮಾಡುತ್ತಿರುವನೆಂಬ ಭಾವನೆ ಇರುವರೆಗೂ ಶಿವರಾಮಯ್ಯನವರಿಗೆ ಇದ್ದಿತು. ಕೆಲಸದ ನಿಜತ್ವ, ಪ್ರಾಮುಖ್ಯ ತಿಳಿದಮೇಲೆ ತಮ್ಮ ಕೈಲಾದಷ್ಟು ಸಹಾಯ ಮಾಡಬೇಕೆಂದೆನಿಸಿತು. ಇಷ್ಟುದಿನವೂ ತಮ್ಮ ಕೆಲಸಕ್ಕಾಗಿ ನಿಂತವರು ಈಗ ಅವನಿಗೆ ಸಹಾಯಮಾಡಲು ಸಾಧ್ಯವಿರುವಾಗ, ಸಹಾಯಬೇಕೆಂದು

ಅವನು ಅಪೇಕ್ಷಿಸುತ್ತಿರುವಾಗ ಹೊರಡುವುದು ಮನಸ್ಸಿಗೆ ಸರಿತೋರಲಿಲ್ಲ. ಆದರೆ ಕೆಲಸ ಹೊಸದು. ನ್ಯೂನತೆಗಳು ಉಂಟಾಗಿ ಅದರಿಂದ ರಾಮ ಸ್ವಾಮಿಗೆ ಕೆಟ್ಟ ಹೆಸರು ಬಂದರೆ ಏನು ಮಾಡುವುದು? ಹೇಗಾದರೂ ಆಗಲಿ ಪ್ರಯತ್ನಮಾಡಿ ನೋಡಿ ಒಂದೆರಡುದಿನದ ಕೆಲಸ ಸರಿಹೋದರೆ ಇರುವುದು ಇಲ್ಲದಿದ್ದರೆ ಹೊರಡುವುದು ಎಂದು ನಿಶ್ಚಯಿಸಿ "ನನಗೆ ಈ ಕೆಲಸದ ಅನು ಭವವಿಲ್ಲ. ಹೇಗೆ ಮಾಡಬೇಕೆಂದು ಹೇಳು ಅನಂತರ ಒಂದೆರಡು ಪುಟ ಗಳನ್ನು ಅವಲೋಕಿಸುತ್ತೇನೆ. ಅದು ಸರಿಯೆಂದು ಕಂಡುಬಂದರೆ ನಿನ್ನ ಅಭಿಪ್ರಾಯದಂತೆ ಈ ಕೆಲಸ ಮುಗಿಯುವವರೆಗೂ ಇಲ್ಲಿ ಇರಲು ಸಂತೋಷ ದಿಂದ ಸಮ್ಮತಿಸುತ್ತೇನೆ" ಎಂದರು.

"ಕೆಲಸದಲ್ಲಿ ಕಷ್ಟವಿಲ್ಲ. ಜಾಗರೂಕತೆ ಬೇಕು. ಕನ್ನಡ ಭಾಷಾ ಜ್ಞಾನಬೇಕು. ಈ ಅಚ್ಚಾದ ಹಾಳೆಗಳನ್ನು ಓದಿ ಒಂಗಕ್ಷರಕ್ಕೆ ಬಗಲಾಗಿ ಇನ್ನೊಂದು ಅಕ್ಷರ ಬಿದ್ದಿದೆಯೇ ನೋಡಬೇಕು. ಕೆಲವು ಕಡೆ ಅಸಮಂಜಸ ಪದಗಳೇ ಬಿದ್ದಿರಬಹುದು. ಕೈಬರಹದ ಪ್ರತಿಯನ್ನು ನೋಡಿಕೊಂಡು ಮಳೆ ಗಳನ್ನು ಜೋಡಿಸಿರುವಾಗ ಈ ಅಚಾತುರ್ಯಗಳು ಸಾಧಾರಣ. ಅನು ಮಾನ ಬಂದಾಗ ಕೈ ಬರಹದ ಪ್ರತಿಯನ್ನು ನೋಡಿ, ತಪ್ಪನ್ನು ಗುರುತು ಮಾಡಿ ಸರಿಯಾದ ಅಕ್ಷರ ಅಥವಾ ಪದವನ್ನು ಸೂಚಿಸಬೇಕು. ಇದನ್ನು ಸಮರ್ಪಕವಾಗಿ ಮಾಡಲು ಕಣ್ಣಲ್ಲಿ ಕಣ್ಣಿಟ್ಟುಕೊಂಡು ಪ್ರತಿ ಅಕ್ಷರವನ್ನೂ ಪರಿಶೀಲಿಸಬೇಕು. ಅಷ್ಟೇ".

"ಆಗಲಿ ನೋಡೋಣ, ನಿನ್ನ ಕೆಲಸ ನೀನು ಇಲ್ಲಿ ನೋಡಿಕೋ. ನಾನು ನಡುಮನೆಗೆ ಹೋಗಿ ಒಂದು ಪುಟ ನೋಡಿಕೊಂಡು ಬರುತ್ತೇನೆ. ನೀನು ಅದನ್ನು ಇನ್ನೊಂದುಸಾರಿ ನೋಡುವಿಯಂತೆ".

"ಬೇಡಣ್ಣ. ಇಲ್ಲೇ ಕುರ್ಚಿಯನ್ನೂ ಮೇಜನ್ನೂ ಹಾಕಿಕೊಂಡು ಕುಳಿತುಕೋ. ಹೊರಗಡೆ ಶಿವು ಬಂದು ನಿನ್ನ ಕೆಲಸ ಕೆಡಸಿ ಬಿಟ್ಟಾನು" ಎಂದು ಹೇಳಿ ಒಂದುಕಡೆ ಕುರ್ಚಿ ಮೇಜುಗಳನ್ನು ಅವರಿಗೆ ಹಾಕಿಕೊಟ್ಟು ಇನ್ನೊಂದು ಕಡೆ ತಾನೂ ಹಾಕಿಕೊಂಡನು.

ರಾಮಸ್ವಾಮಿ ತನ್ನ ಕೆಲಸದಲ್ಲಿ ಮಗ್ನನಾಗಿ ಸುಮಾರು ಅರ್ಧ ಪುಟ ನೋಡಿರಬಹುದು. ಶಿವರಾಮಯ್ಯನವರು "ರಾಮೂ! ರಾಮೂ!" ಎಂದು ಎರಡು ಸಲ ನಡುಗುತ್ತಿರುವ ಧ್ವನಿಯಲ್ಲಿ ಕೂಗಿದರು. ರಾಮಸ್ವಾಮಿಗೆ ಅವರ ಧ್ವನಿಯ ರೀತಿಯನ್ನು ನೋಡಿ ಗಾಬರಿಯಾಯಿತು. "ಏನು ಶಿವಣ್ಣ!" ಎಂದು ಕೇಳುತ್ತಾ ತನ್ನ ಕುರ್ಚಿಯನ್ನು ಬಿಟ್ಟೆದ್ದು ಶಿವರಾಮಯ್ಯನವರ ಬಳಿಗೆ ಬಂದನು.

"ಈ ಪುಸ್ತಕ ಬರೆದವರು ಯಾರು? ಅಚ್ಚಿಗೆ ಕೊಟ್ಟಿರುವವರು ಯಾರು"?

"ಬರೆದವರು ಯಾರೋ ನನಗೆ ಗೊತ್ತಿಲ್ಲ. ಅಚ್ಚಿಗೆ ಬಂದಿರುವುದು ಅರಮನೆಯಿಂದ. ಏಕೆ ಇಷ್ಟು ಗಾಬರಿಯಿಂದ ಕೇಳುತ್ತೀ"?

"ಇದರ ಕೈ ಬರಹದ ಪ್ರತಿ ಇಲ್ಲಿಗೆ ತಂದಿದೀಯಾ"?

"ಇಲ್ಲ. ಅನುಮಾನಾಸ್ಪದವಾದ ಪದಗಳಿದ್ದರೆ ಕಛೇರಿಯಲ್ಲಿ ಅದನ್ನು ಸರಿಪಡಿಸಿದರಾಯಿತು ಎಂದು ತರಲಿಲ್ಲ. ಅದೂ ಅಲ್ಲದೆ ಸಾಧಾರಣವಾಗಿ ಕೈಬರಹದ ಪ್ರತಿಯನ್ನು ಮುದ್ರಣಾಲಯದಿಂದ ಹೊರಗೆ ತರುವುದಿಲ್ಲ. ಏಕೆ ಹೀಗೆ ಪ್ರಶ್ನಿಸುತ್ತೀ"?

"ನಾನು ಸೋಮಶರ್ಮರಲ್ಲಿ ವಿಮರ್ಶೆಗಾಗಿ ಕೊಟ್ಟಿದ್ದ ಪುಸ್ತಕವೇ ಇದು. ಆದುದರಿಂದ ಕೇಳುತ್ತಿದೇನೆ".

"ಇದು ಏನು ನೀನು ಹೇಳುವುದು? ನಿನ್ನ ಪುಸ್ತಕವೆಂದು ಹೇಗೆ ಗೊತ್ತಾಯಿತು"?

"ಬರೆದವನು ನಾನಲ್ಲವೇ? ಇದರ ಪ್ರತಿಯೊಂದು ವಾಕ್ಯವೂ ನನ್ನ ಸ್ವಂತದ್ದಾದ್ದರಿಂದ. ನನ್ನದೇ ಒಂದು ಭಾಗವಾದ ನನ್ನ ಕೈಕಾಲುಗಳನ್ನು ಯಾವ ರೀತಿ ಗುರುತಿಸಬಲ್ಲೆನೋ ಅದೇ ರೀತಿ ಇದನ್ನೂ ಗುರುತಿಸಬಲ್ಲೆನು".

"ಹಾಗೋ! ಅಣ್ಣನಿಗೆ ಈ ವಿಚಾರ ತಿಳಿಸಿ ಅವರು ಏನು ಹೇಳುತ್ತಾರೋ ಕೇಳೋಣ" ಎಂದು ಹೇಳಿ ಬಾಗಿಲ ಹತ್ತಿರ ಹೋಗಿ "ಅಣ್ಣಾ ಅಣ್ಣಾ" ಎಂದು ಕೂಗಿದನು.

ಮಲಗಲು ಸಿದ್ಧರಾಗುತ್ತಿದ್ದ ನಂಜಪ್ಪನವರು "ಏನು ಮಗೂ, ಬಂದೇ" ಎಂದು ಹೇಳುತ್ತಾ ಬೇಗ ಬೇಗ ಬಂದರು. ವಿಷಯ ತಿಳಿದ ಮೇಲೆ "ಏನೋ ಮೋಸ ನಡೆದಿರಬೇಕು ಯಾರ ಮೂಲಕ ಪುಸ್ತಕ ಅರಮನೆಗೆ ಬಂದಿದೆ ಎಂಬುದನ್ನು ಮೊದಲು ತಿಳಿಯಬೇಕು. ಆಚೆಯ ಬೀದಿಯಲ್ಲಿ ಅರಮನೆಯ ಕಛೇರಿಯ ಶ್ರೀಕಂಠಯ್ಯ ಎಂಬ ನನ್ನ ಪರಿಚಿತ ಹುಡುಗನಿದ್ದಾನೆ. ಅವನನ್ನು ವಿಚಾರಿಸಿಕೊಂಡು ಬರುತ್ತೇನೆ. ಹಾಗೆ ಮಾಡುವುದರಿಂದ ನಿನಗೇನೂ ತೊಂದರೆಯಿಲ್ಲವಷ್ಟೆ"?

"ತೊಂದರೆ ಏನು? ಎಲ್ಲರಿಗೂ ತಿಳಿಯುವಂತೆ ಪುಸ್ತಕ ಮುದ್ರಣ ವಾಗುತ್ತಿದೆ. ಇದೇನೂ ಗುಟ್ಟಿನ ವಿಚಾರವಲ್ಲ. ಆದರೂ ಈ ವಿಷಯ ಪೂರ್ತಾ ತಿಳಿಸದೆ, ನಮಗೆ ಬೇಕಾದ್ದನ್ನು ಆತನಿಂದ ತಿಳಿದರೆ ಉತ್ತಮ. ಆತನಿಗೆ ಗೊತ್ತಿದೆಯೆಂಬ ನಂಬಿಕೆಯೇನು? ಗೊತ್ತಿದ್ದರೆ ಹೇಳುತ್ತಾನೇ"?

"ಆತನಿಗೆ ತಿಳಿದಿದ್ದರೆ ನನಗೆ ಖಂಡಿತ ಹೇಳುತ್ತಾನೆ. ಹಿಂದೊಂದು ಸಾರಿ ಆತನ ತಾಯಿಗೆ ಚೇಳು ಕುಟುಕಿದ್ದಾಗ ರಾತ್ರಿ ಹನ್ನೆರಡು ಗಂಟೆಯ ಹೊತ್ತಿನಲ್ಲಿ ಬಂದು ನನ್ನನ್ನು ಕರೆದುಕೊಂಡು ಹೋಗಿದ್ದ. ದೇವರ ದಯ ದಿಂದ ನಾನು ಮಂತ್ರಿಸಿದಮೇಲೆ ಆಕೆಗೂ ಛಳುಕು ನಿಂತುಹೋಯಿತು. ಅದನ್ನು ಆತ ಮನಸ್ಸಿನಲ್ಲಿಟ್ಟುಕೊಂಡಿದಾನೆ. ಕಂಡಾಗಲೆಲ್ಲಾ ಎಷ್ಟೋ ಭಯಭಕ್ತಿಯಿಂದ ನಮಸ್ಕಾರ ಮಾಡುತ್ತಾನೆ".

"ಕಳ್ಳ ನಮಸ್ಕಾರಗಳನ್ನು ಬೇಕಾದಷ್ಟು ಮಾಡುತ್ತಾರೆ. ಸಹಾಯ ಅಪೇಕ್ಷಿಸಿದಾಗ ಗೊತ್ತಾಗುತ್ತದೆ ಜನಗಳ ಯೋಗ್ಯತೆ. ಏಕೆ ಇಷ್ಟು ಹೇಳು ತ್ತೇನೆಂದರೆ, ನೀವು ಈ ರಾತ್ರಿ ಹೊತ್ತಿನಲ್ಲಿ ಅಷ್ಟುದೂರ ಹೋಗಬೇಕಾ ಗುತ್ತದೆ. ನಾಳೆ ಸಾಯಂಕಾಲ ನಾನು ಮನೆಗೆ ಬರುವಾಗ ಸರಿಯಾದ ವರ್ತಮಾನ ಕಛೇರಿಯಿಂದ ತಿಳಿದುಕೊಂಡು ಬರುತ್ತೇನೆ".

"ನಾಳೆ ಸಾಯಂಕಾಲವೆಂದರೆ ಇನ್ನೂ ಇಪ್ಪತ್ತುಗಂಟೆ ಕಾಯಬೇಕಪ್ಪ. ಅಲ್ಲಿಯವರೆಗೆ ನಮ್ಮ ಮನಸ್ಸಿನ ಸ್ಥಿತಿ ಹೇಗಿರುತ್ತದೆ? ಈ ವಿಚಾರ

ಆದಷ್ಟು ಜಾಗ್ರತೆ ತಿಳಿದುಕೊಂಡು ಮುಂದಿನ ಕೆಲಸಗಳನ್ನು ನಾಳೆ ಬೆಳಿಗ್ಗೆಯೇ ಮಾಡಲು ಹೊರಡಬೇಕು. 'ಆಲಸ್ಯಾಗಮೃತಂ ವಿಷಂ' ಎಂಬಂತೆ ನಾವು ತಡಮಾಡಿದಷ್ಟೂ ಕೆಲಸ ಕೆಟ್ಟುಹೋಗುತ್ತದೆ. ಇಷ್ಟರ ಮೇಲೆ ಅವನಿಗೆ ಗೊತ್ತಿಲ್ಲದಿದ್ದರೆ ನೀನು ನಾಳೆ ತಿಳಿದು ಹೇಳುವಿಯಂತೆ. ನಿಮ್ಮ ಕೆಲಸ ನೀವು ಮಾಡುತ್ತಿರಿ. ನಾನು ಒಬ್ಬನೇ ಹೋಗಿ ಇನ್ನು ಅರ್ಧ ಗಂಟೆಯೊಳಗೆ ಬರುತ್ತೇನೆ" ಎಂದು ಹೇಳುತ್ತಾ ಹೊರಟೇಬಿಟ್ಟರು.

" ಚಿಕ್ಕಪ್ಪನಿಗೆ ರಾತ್ರಿ ಹೊತ್ತಿನಲ್ಲಿ ತೊಂದರೆಕೊಟ್ಟಂತಾಯಿತು. ಈಗ ಏನು ಮಾಡಬೇಕೆನ್ನುತ್ತೀ ? ರಾಮು ".

" ನನಗೆ ಏನೂ ತೋರುವುದಿಲ್ಲ. ಅಣ್ಣನ ಲೋಕಾನುಭವ ನಮಗೆ ಸರಿಯಾದ ದಾರಿತೋರಿಸಬೇಕಾಗಿದೆ ".

" ಪುಸ್ತಕ ಅರಮನೆಗೆ ಹೇಗೆ ಬಂದಿರಬಹುದು " ?

" ಬಹುಶಃ ಶರ್ಮರು ಗ್ರಂಥವನ್ನು ಓದಿ, ಅದು ಚೆನ್ನಾಗಿದ್ದುದರಿಂದ ಮಹಾರಾಜರಿಗೆ ತೋರಿಸಿರಬಹುದು. ಪರದೇಶೀಯರು ಅದನ್ನು ಮುದ್ರಿಸುವ ಭಾಗ್ಯ ಏಕೆ ಪಡೆಯಬೇಕೆಂದು ತಾವೇ ಅದನ್ನು ಮುದ್ರಿಸಲು ಮಹಾರಾಜರು ಏರ್ಪಡಿಸಿರಬಹುದು ".

" ಹಾಗಿದ್ದರೆ ಶರ್ಮರು ಏಕೆ ನನಗೆ ಹೇಳಲಿಲ್ಲ ".

" ನೀನು ಇರುವ ಸ್ಥಳ ಅವರಿಗೆ ಹೇಗೆ ಹೊತ್ತು " ?

" ಹೋಗಲಿ. ಟಾನಸ್ಲೇಯವರಿಗೆ ತಿಳಿಸಬೇಡವೆ. ಪಾದ್ರಿಯವರು ಕೊಟ್ಟ ಪುಸ್ತಕ ಅವರಿಗೆ ಹಿಂಗಕ್ಕೆ ಕೊಡದೆ ಮಹಾರಾಜರಿಗೆ ಕೊಡುವುದು ನ್ಯಾಯವೆ ? ಮಹಾರಾಜರೂ ಕೂಡ ಬೇರೊಬ್ಬರು ಪ್ರಕಟಿಸಬೇಕೆಂದಿರುವ ಪುಸ್ತಕವನ್ನು, ಅವರಿಗೆ ತಿಳಿಸದೆ ಅವರ ಒಪ್ಪಿಗೆಯನ್ನು ಪಡೆಯದೆ ಗ್ರಂಥ ಕರ್ತರಿಗೂ ತಿಳಿಸದೆ ಅಚ್ಚುಹಾಕಿಸುವರೇ ? ನನಗೇಕೋ ಇದು ಸಮಂಜಸ ವಾಗಿ ಕಾಣುವುದಿಲ್ಲ ".

"ಹಾಗಿದ್ದರೆ ನಿನ್ನ ಅಭಿಪ್ರಾಯವೇನು"?

"ಯಾರಾದರೂ ಶರ್ಮರ ಮನೆಯಿಂದ ಪುಸ್ತಕವನ್ನು ಕದ್ದು ಗ್ರಂಥ ತಮ್ಮದೇ ಎಂದು ಹೇಳಿ ಮಹಾರಾಜರಿಗೆ ಏಕೆ ಕೊಟ್ಟಿರಬಾರದು"?—ಶಿವ ರಾಮಯ್ಯನವರು ಈ ಮಾತು ಆಡಿ, ತಮ್ಮ ಪತ್ನಿಯು ಗಾಡಿಯಲ್ಲಿ ಕುಳಿತು ಆಡಿದ ಮಾತನ್ನು ಮತ್ತೆ ತಾವೇ ಆಡುತ್ತಿರುವುದನ್ನೂ, ಆಗ ಆಕೆಯನ್ನು ಹಾಸ್ಯಮಾಡಿ ನಕ್ಕುದನ್ನೂ ಮನಸ್ಸಿನಲ್ಲಿ ಜ್ಞಾಪಿಸಿಕೊಂಡರು.

"ಪುಸ್ತಕದ ಯೋಗ್ಯತೆ ಇಂತಹುದೆಂಬುದನ್ನು ತಿಳಿಯಲು ಯೋಗ್ಯತೆ ಯುಳ್ಳವರು ಕಳ್ಳತನಕ್ಕೆ ಬರುವರೇನಣ್ಣಾ? ಅಣ್ಣ ಬರಲಿ. ಆಗ ತಿಳಿಯ ದಿದ್ದರೆ ನಾಳೆ ಮಧ್ಯಾಹ್ನ ನೀನೂ ಅಣ್ಣನೂ ಕಛೇರಿಯ ಹತ್ತಿರ ಬನ್ನಿ. ನಾನು ತಿಳಿದು ಹೇಳುತ್ತೇನೆ. ನಿನಗೆ ಈಗ ಕೆಲಸದಮೇಲೆ ಮನಸ್ಸಿರುವುದು ಕಷ್ಟ. ಬೇಕಾದರೆ ಈ ಪತ್ರಿಕೆ ನೋಡುತ್ತಿರು. ಇಷ್ಟವಿರಲಿ ಇಲ್ಲದಿರಲಿ, ನಾನಂತೂ ಇದನ್ನು ನಾಳೆ ಹೊತ್ತಿಗೆ ಮಾಡಲೇಬೇಕಾದ್ದರಿಂದ ಕೆಲಸ ಮಾಡುತ್ತೇನೆ"?

"ಮಾಡದಿದ್ದರೆ ಹೇಗೆ. ನಾನು ಸಾಧ್ಯವಾದಷ್ಟು ನೋಡುತ್ತಿರುತ್ತೇನೆ. ಬೇಕಾದರೆ ನಾನು ನೋಡಿದ್ದನ್ನು ನೀನು ಮತ್ತೊಂದುಸಾರಿ ನೋಡು".

ಇಬ್ಬರೂ ಕೆಲಸಕ್ಕೆ ಪ್ರಾರಂಭಿಸಿದರು.

ನಂಜಪ್ಪನವರು ಹಿಂದಿರುಗಿ ಬರಲು ಬಹಳ ಸಾವಕಾಶವಾಯಿತು. ಅಣ್ಣತಮ್ಮಂದಿರಿಬ್ಬರೂ ಕೆಲಸದಲ್ಲಿ ತೊಡಗಿದ್ದುದರಿಂದ ಕಾಲಕಳೆದುದು ಗೊತ್ತಾಗಲಿಲ್ಲ. ಒಳಗೆ ಬಂಗವರೇ ನಂಜಪ್ಪನವರು "ಇನ್ನೂ ಎಚ್ಚರವಾ ಗಿದ್ದೀರಾ! ಒಳ್ಳೆಯದೇ ಆಯಿತು. ನೀವು ಮಲಗಿಬಿಟ್ಟಿರುತ್ತೀರೇನೋ ಎಂದು ನಾನು ಯೋಚಿಸುತ್ತಿದ್ದೆ" ಎಂದು ಹೇಳುತ್ತಾ ಒಂದು ಆರಾಮು ಕುರ್ಚಿಯ ಮೇಲೆ ಕುಳಿತರು.

"ಏಕೆ ಚಿಕ್ಕಪ್ಪ, ಇಷ್ಟು ಹೊತ್ತಾಯಿತು. ಸಮಾಚಾರ ಏನಾದರೂ ಗೊತ್ತಾಯಿತೆ"?

"ಶ್ರೀಕಂಠಯ್ಯ ಏನೋ ಸಿಕ್ಕಿದ. ಪಾಪ, ಅವನಿಗೆ ಈಗ ಅಚ್ಚಾಗು ತ್ತಿರುವ ಗ್ರಂಥವನ್ನು ಮಹಾರಾಜರಿಗೆ ಕಳುಹಿಸಿದವರು ಯಾರು ಎಂಬುದು ಸರಿಯಾಗಿ ತಿಳಿದಿರಲಿಲ್ಲ".

"ಹಾಗಾದರೆ ನಿನ್ನ ಶ್ರಮ ವ್ಯರ್ಥವಾಯಿತು".

"ನಾನು ಮೊದಲೇ ಹೇಳಿರಲಿಲ್ಲವೇ, ಅವನು ಬಹಳ ಒಳ್ಳೆಯವನೆಂದು. ಅವನ ಸ್ನೇಹಿತರಾದ ಇನ್ನೊಬ್ಬ ಗುಮಾಸ್ತರ ಮನೆಗೆ ಕರೆದುಕೊಂಡು ಹೊರಟ. ಆ ಗುಮಾಸ್ತರ ಮನೆಗೂ ಇಲ್ಲಿಗೂ ಸುಮಾರು ಒಂದೂವರೆ ಮೈಲಿಯಾಗುತ್ತೆ. ಅಲ್ಲಿ ಹೋದರೆ ಆ ಮಹಾರಾಯ ಹೊರಗಿನ ಗಾಳಿ ಕೂಡ ಒಳಕ್ಕೆ ಹೋಗದಹಾಗೆ ಕಿಟಕಿ ಬಾಗಿಲು ಎಲ್ಲಾ ಮುಚ್ಚಿ ಮಲಗಿ ಬಿಟ್ಟಿದ್ದ ಅನ್ನೋ ಹಾಗೆ ಕಾಣುತ್ತೆ. ಗಾಳೀನೇ ಒಳಕ್ಕೆ ಹೋಗದಿದ್ದಮೇಲೆ ಗಾಳೀ ಮೂಲಕ ಹೋಗುವ ನಮ್ಮ ಕೂಗಿನ ಶಬ್ದ ಆತನಿಗೆ ಹೇಗೆ ಕೇಳಿಸ ಬೇಕು. ನಮ್ಮ ಅಗೃಷ್ಟ ಸ್ವಲ್ಪ ಚೆನ್ನಾಗಿತು ಅಂತ ಕಾಣುತ್ತದೆ. ಆತನ ಮಗು ನಮ್ಮ ಶಿವೂಗಿಂತ ಸ್ವಲ್ಪ ಚಿಕ್ಕಗು ಹೊರಗಡೆ ಹೋಗಬೇಕೂಂತ. ಬೀದಿಯ ಬಾಗಿಲು ತೆಗೆದುಕೊಂಡು ತಂದೆ ಮಗ ಎದ್ದು ಹೊರಗೆ ಬಂದರು. ಶ್ರೀಕಂಠಯ್ಯ ಆತನ ಹತ್ತಿರ ಹೋಗಿ ಐದು ನಿಮಿಷ ಮಾತನಾಡಿಕೊಂಡು ಬಂದನು. ಹಿಂತಿರುಗಿ ಬರುತ್ತಾ ವಿಷಯ ತಿಳಿಸಿದನು".

ಅಣ್ಣ ತಮ್ಮಂದಿರಿಬ್ಬರೂ ಒಟ್ಟಿಗೆ ಕೇಳಿದರು "ಯಾರಂತೆ ಪುಸ್ತಕ ಕಳುಹಿಸಿದವರು?"

"ನೋಡೋಣ, ನೀವು ಹೇಳಿ ಯಾರಿರಬಹುದು"?

"ನೀವು ಹೊರಟು ಹೋಗುತ್ತಲೂ ಊಹಿಸಲು ಪ್ರಾರಂಭಿಸಿ ಒಬ್ಬರ ಊಹೆ ಇನ್ನೊಬ್ಬರ ಮನಸ್ಸಿಗೆ ಒಪ್ಪದೆ ಸುಮ್ಮನಾದೆವು. ನೀವೇ ಹೇಳಿ"?

"ಹೇಳಲೇ—ಸೋಮಶರ್ಮರು".

"ಯಾರ ಗ್ರಂಥ ಎಂದು ಬರೆದು ಕಳುಹಿಸಿದ್ದಾರಂತೆ"? ಶಿವ ರಾಮಯ್ಯನವರು ಮೆಲ್ಲನೆ ಕೇಳಿದರು.

"ಅದನ್ನು ಕೇಳಬೇಕೇನಯ್ಯ, ತಮ್ಮ ಸ್ವಂತ ಕುಶಾಗ್ರಬುದ್ಧಿಗೆ ಹೊಳೆದದ್ದನ್ನು ಸ್ವಂತ ಶಾಯಿಯಲ್ಲಿ, ಸ್ವಂತ ಲೇಖನಿಯಿಂದ ಸ್ವಂತ ಕಾಗದದ ಮೇಲೆ ಸ್ವಹಸ್ತಾಕ್ಷರದಲ್ಲಿ................".

"ಬಿಡಿ ಚಿಕ್ಕಪ್ಪ ತಮಾಷೆ ಮಾಡಬೇಡಿ".

"ಇದರಲ್ಲಿ ಏನಯ್ಯ ತಮಾಷೆ. ಮಹಾರಾಜರು ಒಂದು ಗ್ರಂಥ ಸ್ಪರ್ಧೆಯನ್ನು ಇಟ್ಟಿದ್ದರಂತೆ. ಅದಕ್ಕೆ ಈ ಶರ್ಮರು—ಈ ಅದ್ವಿತೀಯ ಗ್ರಂಥಚೋರರು—ಇದನ್ನು ಕಳುಹಿಸಿದ್ದಾರಂತೆ. ಈಗ ಏನು ಮಾಡುತ್ತೀ"?

ಶಿವರಾಮಯ್ಯನವರು ಎಡದ ಮೊಳಕೈಯನ್ನು ಮೇಜಿನಮೇಲೂರಿ ಈ ವಜ್ರಘಾತದ ಹೊಡೆತವನ್ನು ಸಹಿಸಲಾರದಿದ್ದ ತಲೆಯನ್ನು ಅಂಗಯ್ಯ ಮೇಲಿಟ್ಟರು. ರಾಮಸ್ವಾಮಿ ಕೈಲಿ ಹಿಡಿದಿದ್ದ ಹಾಳೆಗಳನ್ನು ಕೆಳಗಿಟ್ಟು ಮೇಜಿನಮೇಲಿದ್ದ ಸೀಸದ ಕಡ್ಡಿಯನ್ನು ಕೈಯಲ್ಲಿ ತೆಗೆದುಕೊಂಡು ತೂಗ ಲಾರಂಭಿಸಿದನು. ಯಾರಿಗೂ ಏನು ಹೇಳಲೂ ತೋರಲಿಲ್ಲ.

"ಏನಿದು? ಒಬ್ಬ ವಿಶ್ವವಿದ್ಯಾನಿಲಯದ ಪದವೀಧರ, ಅರಮನೆ ಕಛೇರಿ ಯ ನಚ್ಚಿನ ನೌಕರ. ಇನ್ನೊಬ್ಬ ದೊಡ್ಡ ವಿದ್ವಾಂಸ, ಗ್ರಂಥಕರ್ತ, ಕವಿ. ಇಬ್ಬರೂ ಹೀಗೆ ಸುಮ್ಮನೇ ಕುಳಿತುಕೊಂಡರೆ ಏನು ಅರ್ಥ? ಪುಸ್ತಕ ಶರ್ಮರದೇ ಎಂದು ಅಚ್ಚಾಗಿ ಪ್ರಕಟವಾಗಬೇಕೆಂದು ನಿಮ್ಮ ಅಭಿಪ್ರಾಯ ವೇನು"?

"ಎಲ್ಲಾದರೂ ಉಂಟೇ! ಏನಾದರೂ ಮಾಡಿ ಗ್ರಂಥ ಶಿವಣ್ಣ ನದೆಂದು ಮಹಾರಾಜರಿಗೆ ತಿಳಿಯುವಹಾಗೆ ಮಾಡಬೇಕು".

"ಹೇಗೆ ಮಾಡುತ್ತೀ"?

"ಶಿವಣ್ಣ! ನಿನ್ನ ಹತ್ತಿರ ಪುಸ್ತಕದ ಇನ್ನೊಂದು ಪ್ರತಿ ಇದೆಯೇ"?

"ಇಲ್ಲ ರಾಮು. ನಾನು ಬರೆದದ್ದು ಒಂದೇ. ಹೀಗಾಗುತ್ತದೆಂದು ನಾನು ಯೋಚಿಸಿರಲಿಲ್ಲ. ಇನ್ನೊಂದು ಪ್ರತಿ ಮಾಡಿಟ್ಟುಕೊಳ್ಳಲಿಲ್ಲ".

"ಹಾಗಾದರೆ ಕಷ್ಟ ಸ್ವಲ್ಪ ಹೆಚ್ಚಾಯಿತು. ಟಾನಸ್ಲೇಯವರೂ, ಜಾನಯ್ಯನವರೂ ಆಸ್ಪತ್ರೆಯಿಂದ ಬಂದಮೇಲೆ ಮಹಾರಾಜರ ಬಳಿಗೆ ಅವರನ್ನು ಕರೆದುಕೊಂಡು ಹೋಗಬೇಕು. ಅವರ ಸಾಕ್ಷ್ಯವನ್ನು ಮಹಾರಾಜರು ಖಂಡಿತ ನಂಬುವರು".

"ಹಾಗೆ ಮಾಡಬೇಕಾದರೆ ಇನ್ನು ಹದಿನೈದು ದಿನಗಳಾದರೂ ಬೇಕು. ಅಷ್ಟು ಹೊತ್ತಿಗೆ ಪುಸ್ತಕ ಅಚ್ಚಾಗಿ ಪ್ರಕಟವಾಗಿ ಶರ್ಮರ ಪಕ್ಕ ಸ್ಥಿರಪಟ್ಟು ಹೋಗಿರುತ್ತದೆ".

"ಅದು ಹೇಗಣ್ಣ ಆಗುತ್ತೆ. ಮಹಾರಾಜರು ನ್ಯಾಯಪಕ್ಷಪಾತಿಗಳು. ಅನ್ಯಾಯನಡೆಯಲವಕಾಶ ಕೊಡುವುದಿಲ್ಲ. ಆ ಇಬ್ಬರು ದೊಡ್ಡಮನುಷ್ಯರೂ ಗ್ರಂಥ ಶಿವಣ್ಣನದೆಂದು ಹೇಳಿದರೆ ಮಹಾರಾಜರು ಒಪ್ಪುವುದಿಲ್ಲವೆ"?

"ಶರ್ಮರು ಬಾಯಲ್ಲಿ ಕಡುಬು ಕಚ್ಚಿಕೊಂಡು ಕುಳಿತಿರುತ್ತಾರೇನಯ್ಯಾ? ಟಾನಸ್ಲೇಯವರು ಕೊಟ್ಟಿದ್ದುಗು ಬೇರೆ ಗ್ರಂಥವೆಂಗೂ ಅದನ್ನು ಟಾನಸ್ಲೇಯವರು ಆಸ್ಪತ್ರೆಯಲ್ಲಿ ಜ್ಞಾನವಿಲ್ಲದೆ ಮಲಗಿದ್ದಾಗ ಶಿವರಾಮಯ್ಯ ಬಂದು ತೆಗೆದುಕೊಂಡು ಹೋದರೆಂದು ಹೇಳಿದರೆ"!

"ಪುಸ್ತಕದ ಪ್ರತಿ ನನ್ನಲ್ಲಿಲ್ಲದಿದ್ದರೂ ಅದರ ಪ್ರತಿಯೊಂದು ವಾಕ್ಯವೂ ನನ್ನ ಬಾಯಲ್ಲಿದೆ ಸಮಯಬಂದರೆ ಬೇಕಾಗ ಭಾಗದಿಂದ ವಾಕ್ಯಗಳನ್ನು ಉದಾಹರಿಸಿ ನನ್ನ ಮಾತಿನ ಸತ್ಯವನ್ನು ತೋರಿಸಬಹುದಲ್ಲ".

"ಇಲ್ಲಿ ನೋಡು! ಟಾನಸ್ಲೇಯವರಾಗಲಿ ಜಾನಯ್ಯನವರಾಗಲಿ ನಿನ್ನ ಗ್ರಂಥ ಓದಿಲ್ಲ. ಆದುದರಿಂದ ಇದೇ ನಿನ್ನ ಗ್ರಂಥವೆಂದು ಅವರು ಹೇಳಲು ಶಕ್ತರಲ್ಲ. ನಾನೇ ಶರ್ಮರಾಗಿದ್ದರೆ ಏನು ಹೇಳುತ್ತಿದ್ದೆ ಗೊತ್ತೇ? ಗ್ರಂಥ ಹೊರಬಿದ್ದು ಹದಿನೈದು ದಿನಗಳ ಮೇಲಾಯಿತು. ಇವರ ಗ್ರಂಥ ಚೆನ್ನಾಗಿಲ್ಲವೆಂದು ನಾನು ಹೇಳಲು; ನನಗೆ ಕೆಟ್ಟಹೆಸರು ತರಬೇಕೆಂಬ ದುರುದ್ದೇಶ ಪ್ರೇರಿತರಾಗಿ, ನನ್ನ ಗ್ರಂಥ ಕಂಠಪಾಠಮಾಡಿ ಈ ರೀತಿ ಹೇಳುತ್ತಿದಾರೆ, ಎಂದು ಹೇಳುತ್ತಿದ್ದೆ. ಶರ್ಮರು ಹೆಸರು ಪಡೆದ ಆಸ್ಥಾನ ವಿದ್ವಾಂಸರು.

ನೀನು ಅಪರಿಚಿತ ಮನುಷ್ಯ. ಯಾರ ಮಾತಿನಲ್ಲಿ ಮಹಾರಾಜರಿಗೆ ನಂಬಿಕೆ ಹುಟ್ಟುತ್ತದೆ? ಇಷ್ಟೇನೋ ನಿಮ್ಮ ಚಾಣಿಕ್ಯ ತಂತ್ರ, ಇನ್ನೇನಾದರೂ ಇದೆಯೋ"?

ಅಣ್ಣತಮ್ಮಂದಿರಿಬ್ಬರೂ ಸೋಲನ್ನೊಪ್ಪಿಕೊಂಡರು. ಕುರುಕ್ಷೇತ್ರದಲ್ಲಿ ತಾನು 'ಕುರುಕುಲದ ಬಡಬಾನಲ'ನೆಂದು ಗುಡುಗಾಡುತ್ತಿದ್ದ ಅರ್ಜುನನು ನಮ್ರತೆಯಿಂದ ಪಾದಗಳಿಗೆರಗಿ 'ನಾನು ಅಜ್ಞ, ನನ್ನನ್ನು ಉದ್ಧರಿಸು' ಎಂದು ಶರಣು ಬಂದಾಗ ಶ್ರೀಕೃಷ್ಣನಿಗೆ ಆಗದಿದ್ದಷ್ಟು ಸಂತೋಷ ನಂಜಪ್ಪ ನವರಿಗೆ ಈಗ ಆಯಿತು. ಆರಾಮಕುರ್ಚಿಯಲ್ಲಿ ಎದ್ದು ಕುಳಿತುಕೊಂಡು "ನಾಳೆ ಬೆಳಿಗ್ಗೆ ಆಸ್ಪತ್ರೆಗೆ ಹೋಗಿ ಲಿಲ್ಲಿಯಮ್ಮನವರಿಗೆ ವಿಚಾರವೆಲ್ಲವನ್ನೂ ತಿಳಿಸು. ಅವರಿಗೆ ಅಂತಃಪುರದಲ್ಲಿ ಬಳಕೆ ಇದೆಯೆಂದು ಹಿಂದೆಯೇ ಹೇಳಿದ್ದೇನೆ. ಆ ಮುಖಾಂತರ ಮಹಾರಾಜರಿಗೆ ವರ್ತಮಾನ ಕಳುಹಿಸಿ ಈ ಅನ್ಯಾಯವನ್ನು ಸರಿಪಡಿಸಬೇಕೆಂದು ಪ್ರಾರ್ಥಿಸೋಣ. ನಮ್ಮ ಕೆಲಸ ನೆರವೇರುವುದರಲ್ಲಿ ಸಂದೇಹವಿಲ್ಲ. ಏನು ಹೇಳುತ್ತೀರಿ"?

ರಾಮುಸ್ವಾಮಿಗೆ ತಂದೆಯ ಸಲಹೆ ಒಪ್ಪಿತು. ಶಿವರಾಮಯ್ಯನವರು "ನಾನೂ ಅದು ಸರಿಯೆಂದು ಹೇಳುತ್ತೇನೆ. ಆದರೆ ಲಿಲ್ಲಿಯವರನ್ನು ನೋಡುವುದಕ್ಕೆ ಮುಂಚೆ ಶರ್ಮರನ್ನು ನೋಡಿ ಅವರು ಏನು ಹೇಳುತ್ತಾರೆಯೋ ತಿಳಿದುಕೊಳ್ಳುವುದು ಒಳ್ಳೆಯದಲ್ಲವೇ? ಅವರು ಒಳ್ಳೆಯ ಉದ್ದೇಶದಿಂದ ಗ್ರಂಥವನ್ನು ಅರಮನೆಗೆ ಕಳುಹಿಸಿದ್ದರೆ ನಾವು ಮಹಾರಾಜರಿಗೆ ದೂರು ಹೇಳುವುದರಿಂದ ಅವರಿಗೆ ಅನ್ಯಾಯ ಮಾಡಿದಂತಾಗುವುದಿಲ್ಲವೇ"?

"ಸರಿ ಬಿಡಯ್ಯ, ನೀನೊಂದು ಧರ್ಮಗೊಡ್ಡು. ಇಷ್ಟೆಲ್ಲಾ ತಿಳಿನೂ ತಿಳಿದೂ ಇನ್ನೂ ಶರ್ಮರು ನಿನಗೆ ಸಹಾಯ ಮಾಡುತ್ತಿರುವರೆಂದು ಯೋಚಿಸುವ ಸಾಹಸ ಮಾಡುತ್ತೀಯೆ. ಅದರಿಂದ ಕಾಲವ್ಯರ್ಥವೇ ಹೊರತು ನನ್ನ ಮೊಂಡ ಬುದ್ಧಿಗೆ ಪ್ರಯೋಜನ ಏನೂ ಕಾಣುವುದಿಲ್ಲ. ನೀನೇನು ಹೇಳುತ್ತೀ ರಾಮು"?

"ಶಿವಣ್ಣ ಹೇಳುವುದು ಒಂದು ತರಹದಲ್ಲಿ ಸರಿ. ಶರ್ಮರ ಮೇಲೆ ನಾವು ಆರೋಪಣೆ ಹೊರಿಸಿ ಅದನ್ನು ಮಹಾರಾಜರು ವಿಚಾರಿಸಿ ಶರ್ಮರು ಮಾಡಿದ್ದು ತಪ್ಪಲ್ಲವೆಂದು ಧೃಡಪಟ್ಟರೆ ನಾವು ಪೆಚ್ಚುಮೋರೆ ಹಾಕಿಕೊಳ್ಳ ಬೇಕಾಗುತ್ತದೆ. ಶಿವಣ್ಣನಿಗೆ ಸಿಕ್ಕಬಹುದಾಗ ಉತ್ತೇಜನಕ್ಕೂ ಅದರಿಂದ ಕುಂದಕ ಉಂಟಾಗಬಹುದು. ನಾಳೆ ಬೆಳಗ್ಗೆ ಶರ್ಮರನ್ನು ನೋಡಿಕೊಂಡು ಬರಲಿ. ಅವರ ಉತ್ತರ ಸಮಂಜಸವಾಗಿ ಕಂಡುಬರದಿದ್ದಲ್ಲಿ ಮಧ್ಯಾಹ್ನ ಲಿಲ್ಲಿಯವರಿಗೆ ತಿಳಿಸಿದರಾಯಿತು. ಇದರಿಂದ ಕಾಲನಷ್ಟ ಹೆಚ್ಚೇನೂ ಆದಂತೆ ಆಗುವುದಿಲ್ಲ. ನಮ್ಮ ಸ್ಥಾನ ಭದ್ರಪಡಿಸಿಕೊಂಡಂತಾಗುತ್ತದೆ".

ಈ ವಾದವನ್ನು ನಂಜಪ್ಪನವರೂ ಒಪ್ಪಿದರು. ಅಂತೆಯೇ ತೀರ್ಮಾನಿಸಿ ಎಲ್ಲರೂ ಮಲಗಲು ಹೊರಟರು.

## ೧೭

ಪುಸ್ತಕ ಪರಿಶೀಲಿಸುವುದಕ್ಕೆ ನಿಯತವಾಗಿದ್ದ ಕಾಲವು ತೀರಿದಂತೆಲ್ಲ ಸೋಮಶರ್ಮರಿಗೆ ಯೋಚನೆಯು ಹೆಚ್ಚಾಗಲಾರಂಭಿಸಿತು. ಕೊನೆಯ ದಿನವಾದ ಗುರುವಾರ ಕುಳಿತಕಡೆ ಕುಳ್ಳಿರಲಾಗಲಿಲ್ಲ. ನಿಂತಕಡೆ ನಿಲ್ಲಲಾಗಲಿಲ್ಲ. ಏನು ಕೆಲಸ ಮಾಡಲೂ ಬುದ್ಧಿಯು ಸ್ಥಿರವಾಗಿ ನಿಲ್ಲಲಿಲ್ಲ. ಹೊರಗಡೆ ಏನು ಶಬ್ದವಾದರೂ ಪಾದ್ರಿಗಳೋ ಅವರ ಕಡೆಯವರು ಯಾರೋ ಬಂದರೆಂದು ಭಾಸವಾಗಿ ಹೃದಯದ ಮಿಡಿತದವೇಗವು ಹೆಚ್ಚಾಗುತ್ತಿದ್ದಿತು. ಮಕ್ಕಳು ಹತ್ತಿರಬಂದು ಪ್ರೀತಿಯಿಂದ ಮಾತನಾಡಿಸಿದರೆ ಸಿಡಿಗುಟ್ಟುತ್ತಾ ಅವರನ್ನು ದೂರ ಕಳುಹಿಸುತ್ತಿದ್ದರು. ಸಂಧ್ಯಾಸಮಯದವರೆಗೂ ಯಾರೂ ಬರದಿರಲು ಸಂಧ್ಯಾವಂದನೆಗಾಗಿ ಕೈಕಾಲು ತೊಳೆದುಕೊಳ್ಳಲು ಒಳಗೆ ಹೋದರು. ಕೈಕಾಲು ತೊಳೆದುಕೊಳ್ಳುತ್ತಿದ್ದಾಗ ಹೊರಗಡೆ ಯಾರೋ ಕೂಗಿದಂತಾಗಿ ಪತ್ನಿಯು ಅವರನ್ನು ಕುಳ್ಳಿರಹೇಳೆಂದು ರಂಗನಿಗೆ ಹೇಳಿದ್ದು ಕೇಳಿ ಕೈಲಿ ಹಿಡಿದಿದ್ದ ನೀರಿನ ಪಾತ್ರೆ ಹಾಗೇ ಬಚ್ಚಲಿಗೆ ಬಿದ್ದಿತು. ಹೊರಗೆ ಯಾರಾದರೂ ಬಂದಿರುವರೆಂಬ ವರ್ತಮಾನ ಸಂಧ್ಯಾವಿಧಿಗೆ ಕೂಡಲು

ಮೊದಲು ತಿಳಿದರೆ ತಕ್ಷಣವೇ ಹೊರಗೆ ಬಂದು ಅವರೊಡನೆ ಮಾತಾಡಿ ಕಳುಹಿಸಿ ಬರುತ್ತಿದ್ದವರು, ಈ ದಿನ ನೇರವಾಗಿ ದೇವರಮನೆಗೆ ಹೋದದ್ದು ನೋಡಿ ಅವರ ಪತ್ನಿಗೆ—ಇಂದು ಏಕೆ ಹೀಗೆ ಮಾಡಿದರೆಂಬುದು ಒಂದು—ಸಮಸ್ಯೆಯಾಯಿತು. ಎಂದಿಗಿಂತ ಹೆಚ್ಚು ಹೊತ್ತು ದೇವರಮನೆಯಲ್ಲಿದ್ದು ಬಂದು ಮನಸ್ಸಿಲ್ಲದ ಮನಸ್ಸಿನಿಂದ ಕೊಠಡಿಯ ಬಾಗಿಲನ್ನು—ಸಿಂಹದ ಬೋನಿನ ಬಾಗಿಲನ್ನು ತೆಗೆಯುವಂತೆ—ತೆರೆದು ಒಳಗೆ ಇಣಿಕಿನೋಡಿದರು. ಒಳಗೆಕೂತಿದ್ದ ಹರಕಲುಪಂಚೆ ಧೋತ್ರದ ವ್ಯಕ್ತಿ ಎದ್ದು ತನ್ನ ಪ್ರವರ ಹೇಳಿಕೊಂಡು ಮುಂದೆ ಬರಲಿರುವ ಮಗಳ ಲಗ್ನಕ್ಕೆ ಸಹಾಯ ಯಾಚಿಸಲು ತಲೆಯಮೇಲಿಂದ ದೊಡ್ಡ ಭಾರ ಇಳಿದಂತಾಗಿ ಯಾಚಕನು ನಿರೀಕ್ಷಿಸಿದ್ದುದ ಕ್ಕಿಂತಲೂ ಎರಡರಷ್ಟು ಕೊಟ್ಟು ಕಳುಹಿಸಿ, ಸರಸ್ವತಿಯ ಪಟದಮುಂದೆ ನಿಂತು ಆಕೆಯಕಡೆ ದೃಷ್ಟಿಸಿನೋಡುತ್ತಾ ಕಣ್ಣಿನಲ್ಲಿ ನೀರು ಸುರಿಸಲಾರಂಭಿಸಿದರು.

ರಾತ್ರಿ ಕಣ್ಣಿಗೆ ನಿದ್ದೆಯೇ ಹತ್ತಲಿಲ್ಲ. ಸ್ವಲ್ಪ ರೆಪ್ಪೆಯೊಂದು ಬಂದಿ ತೆಂದರೆ ಕನಸಿನಲ್ಲಿ ಟಾನಸ್ಲೇಯವರು ಬಂದು ಪುಸ್ತಕವನ್ನು ಹಿಂದಕ್ಕೆ ಕೇಳಿ ದಂತೆ ಭಾಸವಾಗಿ ಮೈಯೆಲ್ಲ ಬೆವರಿಟ್ಟು ಎಚ್ಚರವಾಗುತ್ತಿದ್ದಿತು. ನಿನ್ನೆ ಏನೋ ಕಾರ್ಯ ಗೌರವದಿಂದ ಬಾರದೇ ಇರಬೇಕು. ಈ ದಿನ ಬರುವುದು ಖಂಡಿತ. ಬರಿಯ ಕೈಯ್ಯಲ್ಲಿ ಅವರನ್ನು ಹೇಗೆ ಹಿಂದಕ್ಕೆ ಕಳುಹಿಸುವುದು. ಏನು ಸಮಾಧಾನ ಹೇಳುವುದು. ಎಂಬ ಯೋಚನೆಯಿಂದ ಶುಕ್ರವಾರ ಪ್ರಾರಂಭವಾಯಿತು. ಸ್ನಾನ ಸಂಧ್ಯೆ, ದೇವತಾರ್ಚನೆ ಮೊದಲಾದ ನಿತ್ಯ ವಿಧಿಗಳೆಲ್ಲವೂ ಅಭ್ಯಾಸ ಬಲದಿಂದ ಅವರ ಬುದ್ಧಿಗೆ ತಿಳಿದೂ ತಿಳಿಯದಂತೆ ನಡೆದುಹೋದುವು. ಎಲ್ಲ ಮುಗಿಸಿಕೊಂಡು ಹೊರಗೆ ಬಂದವರೇ ಪಾದ್ರಿಗಳ ಬರವನ್ನು ನಡುಗುತ್ತಿರುವ ಹೃದಯದಿಂದ ನಿರೀಕ್ಷಿಸುತ್ತಾ ಏನು ಕೆಲಸ ವನ್ನೂ ಮಾಡದೆ ಕುಳಿತುಬಿಟ್ಟರು.

ಹೊರಗಡೆ ಯಾರೋ ಮಾತನಾಡಿದ ಶಬ್ದವಾಯಿತು. ಹೃದಯದ ನಡುಕವೂ ಹೆಚ್ಚಾಯಿತು. ರಂಗನು ಬಂದು ಬಾಗಿಲನ್ನು ತೆರೆದನು. ಕತ್ತೆತ್ತಿ ನೋಡಿ ಅವನನ್ನು ಏನು ಎಂದು ಕೇಳುವ ಸಾಹಸವನ್ನೂ ಮಾಡದೆ ಇಳಿಜಾರು ಮೇಜಿನಮೇಲಿದ್ದ ಒತ್ತುವ ಕಾಗದವನ್ನು ನೋಡುತ್ತ

ಕುಳಿತರು. ರಂಗನು ಸ್ವಲ್ಪ ನಿಂತನು. ಯಜಮಾನರಿಂದ ಯಾವ ಸೂಚನೆಯೂ ಬಾರದಿದ್ದುದರಿಂದ ಸದ್ದುಮಾಡದೆ ಮುಂದೆ ಒಂದು ಪತ್ರಿಕೆಯ ಹುಡುಗನು ತಂದುಕೊಟ್ಟು ಹೋಗಿದ್ದ ಪತ್ರಿಕೆಯನ್ನು ಚಾಪೆಯಮೇಲಿಟ್ಟನು. ತೆರೆದ ಬಾಗಿಲಿಂದ ಗಾಳಿ ಒಳನುಗ್ಗಿ ಇಟ್ಟ ಪತ್ರಿಕೆಯ ಹಾಳೆಗಳು ಹಾರಿ ಮುರ ಮುರ ಶಬ್ದವಾಯಿತು.

ಶಬ್ದವಾದಕಡೆ ಕಣ್ಣು ಸ್ವಾಭಾವಿಕವಾಗಿ ತಿರುಗಿತು. ಹೊಸ ಪತ್ರಿಕೆಯನ್ನು ಕೈಗೆ ತೆಗೆದುಕೊಂಡು ಉತ್ಸುಕತೆಯ ಕುರುಹೇ ಇಲ್ಲದೆ ನೋಡಲಾರಂಭಿಸಿದರು. ಮೊದಲನೇ ಪುಟದಲ್ಲಿಯೇ ದಪ್ಪ ಅಕ್ಷರಗಳಿಂದ 'ರಾಜಧಾನಿಯಲ್ಲಿ ಮೋಟಾರ್ ಅಪಘಾತ' ಎಂದಿದ್ದಿತು. ವಿವರಣೆಗಳನ್ನು ಓಗಬೇಕೆಂಬ ಮನಸ್ಸುಂಟಾಗಿ ಎಲ್ಲವನ್ನೂ ಒಂದು ಸಲ ಓದಿದರು. ಸರಿಯಾಗಿ ಅರ್ಥವಾಗಲಿಲ್ಲ. ಇನ್ನೊಂದು ಸಲ ಓದಿದರು. ಆಗ ತಾವು ಓದುತ್ತಿದ್ದುದರ ಅರ್ಥ ಮನಸ್ಸಿಗೆ ಪೂರ್ಣವಾಗಿ ಆಯಿತು. ಎಂತಹ ಒಳ್ಳೆಯ ಮನುಷ್ಯ. ಎಂತಹ ವಿಪತ್ತು ಸಂಭವಿಸಿತು. ಎಂದು ಅನುತಾಪ ಅಂಕುರಿಸಿತು. ಅದರ ಸಂಗಡಲೇ ಅವರು ಬೇಡ ಬೇಡವೆಂದರೂ ಒಂದು ತರಹ ಸಮಾಧಾನವೂ ಆಯಿತು. ಗಾಯಗಳು ಸಂಪೂರ್ಣವಾಗಿ ಗುಣವಾಗಿ ಟಾನಸ್ಲೇಯವರು ಆಸ್ಪತ್ರೆಯಿಂದ ಬರಬೇಕಾದರೆ ಕನಿಷ್ಠಪಕ್ಷ ಹದಿನೈದು ದಿನಗಳು ಬೇಕು. ಅದುವರೆಗೂ ತಮಗೆ ಒಂದು ಅವಕಾಶ ಸಿಕ್ಕಿತು. ಇದು ಅನಿರೀಕ್ಷಿತ ದೈವ ಸಹಾಯ. ಆ ವೇಳೆಗೆ ಗ್ರಂಥವನ್ನು ಹಿಂದಕ್ಕೆ ಕೊಡಲು ಯಾವ ಅಭ್ಯಂತರವೂ ಇರುವುದಿಲ್ಲ. ಭಗವಂತನು ನನ್ನನ್ನು ಕಾಪಾಡಿದ ಎಂಬ ಸಮಾಧಾನ. ಸಾಯಂಕಾಲ ಆಸ್ಪತ್ರೆಯಕಡೆ ಹೋಗಿ ಅವರನ್ನು ವಿಚಾರಿಸಿಕೊಂಡು ಬರೋಣವೆಂದು ಯೋಚಿಸಿದರು. ಮರುಕ್ಷಣವೇ ಟಾನಸ್ಲೇಯವರೇನಾದರೂ ಮಾತನಾಡುವ ಸ್ಥಿತಿಯಲ್ಲಿದ್ದು ಪುಸ್ತಕದ ವಿಚಾರ ಪ್ರಸ್ತಾಪಿಸಿಯಾರೆಂಬ ಶಂಕೆ ಮೊದಲಿನ ಯೋಚನೆಯನ್ನು ಹೊರದೂಡಿತು. ಒಟ್ಟಿನಲ್ಲಿ ಮನಸ್ಸು ಸಮಾಧಾನಸ್ಥಿತಿಗೆ ಬಂದು ಸೋಮಶರ್ಮರ ಮುಖ ಪ್ರಸನ್ನವಾಯಿತು.

ಮಾನವನ ಹೃದಯವು ನಗು ಅಳುಗಳ ನಡುವೆ ತೂಗಾಡುವ ತೊಟ್ಟಿಲು. ಇಂದು ಸುಖ ನಾಳೆ ಅಸಹನೀಯ ದುಃಖ. ಅನುಭವಿಸುವವನಿಗೆ

ಸುಖ ಕ್ಷಣಿಕವಾಗಿಯೂ ದುಃಖವು ಅನಂತವಾಗಿಯೂ ಕಂಡುಬರುವುದು. ಅವು ಮನಸ್ಸಿನಮೇಲೆ ಉಂಟುಮಾಡುವ ಪರಿಣಾಮದಿಂದ ಹಗಲೂ ರಾತ್ರಿ ಪರಿಮಾಣಗಳು ಯಾವರೀತಿ ಒಟ್ಟಿನಲ್ಲಿ ಸಮಾನವಾಗಿರುವುವೋ ಸುಖದುಃಖ ಗಳ ಪರಿಮಾಣಗಳೂ ಹಾಗೆಯೇ. ಎರಡೂ ನಶ್ವರ. ಒಂದರ ಹಿಂದೆ ಒಂದು ಕಾದಿರುತ್ತದೆ. ಗುರುವಾರ ಶುಕ್ರವಾರ ಶರ್ಮರ ಮನಸ್ಸು ಕದಡಿ ಹೋಗಿದ್ದು ಶನಿವಾರ ಭಾನುವಾರ ಸಮಾಧಾನ ಹೊಂದಿದ್ದಿತು. ಸೋಮ ವಾರ ಗ್ರಂಥದ ತೊಡಕಿನ ವಿಷಯವೇ ಮನಸ್ಸಿನಿಂದ ತೊಡೆದುಹೋಗಿ ಮಂಗಳವಾರ ದಿನಚರಿಯಂತೆ ಗ್ರಂಥಾವಲೋಕನದಲ್ಲಿ ಮಗ್ನರಾಗಿದ್ದರು. ಇದ್ದಕ್ಕಿದ್ದಂತೆಯೆ ಬೀದಿಯ ಬಾಗಿಲಲ್ಲಿ "ಶರ್ಮರು ಮನೆಯಲ್ಲಿದ್ದಾರೆಯೇ? ನೋಡಲು ಅವಕಾಶವಿದೆಯೇ?" ಎಂದು ಯಾರೋ ಆಳನ್ನು ಪ್ರಶ್ನಿಸಿದರು. ಧ್ವನಿ ಯಾರದೆಂಬುದು ಜ್ಞಾಪಕಕ್ಕೆ ಬರುತ್ತಲೇ ಶರ್ಮರ ಹೃದಯ ಧಸ್ಸೆಂದಿತು.

"ಮನೇಗೆ ಅವ್ರೆ. ಸ್ವಲ್ಪಮುಂಚೆ ಪೂಜೆ ತೀರಿಸ್ಕೊಂಡು ಬಂದ್ರು. ಕೇಳ್ಕೊಂಡು ಬರ್ತೀನಿ" ಎಂದು ಹೇಳುತ್ತಾ ರಂಗನು ಒಳಗೆ ಬಂದು "ಯಾರೋ ಅಯ್ಯನೋರು ನೋಡಬೇಕೂ ಅಂತ ಬಂದವ್ರೆ" ಎಂದನು.

ಒಳಗಿದ್ದವರನ್ನು ಇಲ್ಲವೆಂದು ರಂಗನು ಎಂದೂ ಯಾರಿಗೂ ಹೇಳಿರ ಲಿಲ್ಲ. ಹಾಗೆ ಹೇಳಬೇಕೆಂದು ಹಿಂದೆಂದೂ ಯಜಮಾನರು ಹೇಳಿರಲಿಲ್ಲ. ಇಂದು ಅವನು ಹಾಗೆ ಹೇಳಿದ್ದರೆ ಶರ್ಮರಿಗೆ ಬಹಳ ಉಪಕಾರ ಮಾಡಿ ದಂತಾಗುತ್ತಿತ್ತು. ಈಗ ಬೇರೆ ಉಪಾಯವಿಲ್ಲದೆ ಕುಗ್ಗಿದ ಧ್ವನಿಯಲ್ಲಿ ಶರ್ಮರು "ಒಳಗೆ ಬರಹೇಳು" ಎಂದರು.

ಶಿವರಾಮಯ್ಯನವರು ಒಳಗೆ ಪ್ರವೇಶಿಸಿ "ನಮಸ್ಕಾರ" ಎಂದು ಹೇಳಿ ನಿಂತುಕೊಂಡರು.

"ನಮಸ್ಕಾರ, ಕುಳಿತುಕೊಳ್ಳಿ".

ಸ್ವಲ್ಪಹೊತ್ತು ಇಬ್ಬರೂ ಮಾತಿಲ್ಲದೆ ಸುಮ್ಮನೆ ಕುಳಿತರು. ಯಾರಿಗೂ

ಹೇಗೆ ಮಾತಿಗೆ ಪ್ರಾರಂಭಿಸುವುದು ಎಂಬುದೇ ತಿಳಿಯಲಿಲ್ಲ. ಕೊನೆಗೆ ಶಿವರಾಮಯ್ಯನವರೇ "ಟಾನಸ್ಲೇಯವರಿಗಾದ ಅಪಘಾತದ ಸಂಗತಿ ತಮಗೆ ತಿಳಿದಿರಬಹುದು" ಎಂದರು.

"ಪತ್ರಿಕೆಯಲ್ಲಿ ಓದಿದೆ. ಬಹಳ ದುಃಖಕರವಾದ ಸಂಗತಿ. ಈಗ ಅವರ ಸ್ಥಿತಿ ಹೇಗಿದೆ. ತಾವೇನಾದರೂ ಆಸ್ಪತ್ರೆಗೆ ಹೋಗಿ ಅವರನ್ನು ನೋಡಿದಿರೇನು ?

"ಹೋಗಿದ್ದೆ. ಪ್ರಾಣಭಯವಿಲ್ಲವಂತೆ. ಪೂರ್ತಿ ಗುಣವಾಗಿ ಹೊರಗೆ ಬರಲು ಇನ್ನೂ ಎರಡು ವಾರಗಳಾದರೂ ಆಗಬೇಕಂತೆ".

"ಎರಡಲ್ಲದಿದ್ದರೆ ಮೂರಾಗಲಿ, ನಾಲ್ಕಾಗಲಿ. ಜೀವ ಉಳಿದರೆ ಸಾಕು. ತಾವು ಎಂದು ಬಂದಿರಿ" ?

"ನಾನು ಊರಿಗೆ ಹೋಗಿಯೇ ಇಲ್ಲ. ಪಾದ್ರಿಗಳ ಅಭಿಪ್ರಾಯದಂತೆ ಪುಸ್ತಕದ ವಿಷಯದಲ್ಲಿ ಒಂದು ನಿರ್ಧಾರಕ್ಕೆ ಬಂದು ಆಮೇಲೆ ಹೊರಡೋಣ ವೆಂದಿದ್ದೆ".

"ಹಾಗಿದ್ದರೆ ತಾವು ಇನ್ನೂ ಎರಡುಮೂರು ವಾರಗಳು ಇಲ್ಲಿ ಇರೋಣ ವಾಗುತ್ತದೆ. ಅಲ್ಲವೇ" ?

"ಊರಿನಿಂದ ಬಂದು ಬಹಳ ದಿನಗಳಾದುವು. ಈಗ ಹೋಗ ಬೇಕೆಂದು ಅಭಿಪ್ರಾಯ".

"ಅಲ್ಲಿ ಅಂತಹ ಮುಖ್ಯವಾದ ಕೆಲಸಗಳಿದ್ದರೆ ಈಗಿನ ಸಂದರ್ಭದಲ್ಲಿ ಹೋಗಿಬರುವುದೇ ಉತ್ತಮವೆಂದು ತೋರುತ್ತದೆಯಲ್ಲವೇ" ?

"ಹೋದಮೇಲೆ ತಿರುಗಿ ಬರುವ ಅಭಿಪ್ರಾಯ ನನಗಿಲ್ಲ".

"ಹಾಗೇನು" ?

"ತಮ್ಮಿಂದ ಸ್ವಲ್ಪ ಸಹಾಯವಾದರೆ ಹಾಗೆ ಮಾಡಲು ಸಾಧ್ಯ".

“ನಾನೇನು ಸಹಾಯ ಮಾಡಬಲ್ಲೆ”?

“ನನಗೆ ಈಗ ಪುಸ್ತಕ ಅಚ್ಚುಹಾಕಿಸುವುದು ಸೂಕ್ತವಲ್ಲವೆಂದು ತೋರುತ್ತದೆ. ಆದುದರಿಂದ ಸದ್ಯಕ್ಕೆ ಅದನ್ನು ನನ್ನ ಜೊತೆಯಲ್ಲಿ ಹಿಂದಕ್ಕೆ ತೆಗೆದುಕೊಂಡು ಹೋಗಬೇಕೆಂದಿದ್ದೇನೆ”.

“ಈಗ ಆ ವಿಚಾರ ತಮ್ಮ ಕೈಮಿಂಚಿಹೋಗಿ ಟಾನಸ್ಲೇಯವರ ಕೈಲಿ ಇದೆಯಲ್ಲವೇ”?

“ನಾನು ಬೇಡವೆಂದರೆ ಟಾನಸ್ಲೇಯವರು ನನ್ನ ಇಷ್ಟಕ್ಕೆ ವಿರೋಧವಾಗಿ ಏನೂ ಮಾಡುವುದಿಲ್ಲ. ಆದುದರಿಂದ ತಮ್ಮಿಂದ ಪುಸ್ತಕವನ್ನು ಪಡೆದು, ಆ ವಿಚಾರವನ್ನು ಟಾನಸ್ಲೇಯವರಿಗೆ ಕಾಗದದಲ್ಲಿ ಬರದಿಟ್ಟು ಊರಿಗೆ ಹೊರಡೋಣವೆಂದಿದೇನೆ”.

“ಅದು ಹೇಗೆ ಸಾಧ್ಯ. ಪುಸ್ತಕ ನನಗೆ ಪಾದ್ರಿಗಳ ಮೂಲಕ ಬಂದಿದೆ. ನಾನು ಅದನ್ನು ಅವರಿಗೇ ಹಿಂತಿರುಗಿ ಕೊಡಬೇಕಲ್ಲದೆ, ನಿಮ್ಮದೆಂದು ತಿಳಿದಿದ್ದರೂ ಹೇಗೆ ಹಿಂದಕ್ಕೆ ಕೊಡಲಿ”?

“ತಾವು ದೊಡ್ಡಮನಸ್ಸುಮಾಡಿ ಸಹಾಯಮಾಡಬೇಕು ಪುಸ್ತಕ ನನಗೆ ಸಂದಿತೆಂದು ತಮಗೂ ಪಾದ್ರಿಗಳಿಗೂ ಕಾಗದ ಬರೆದು ಕೊಡುತ್ತೇನೆ. ಟಾನಸ್ಲೇಯವರು ಅನ್ಯಥಾ ಭಾವಿಸುವುದಿಲ್ಲ. ನನಗೂ ಬಹಳ ಸಹಾಯ ಮಾಡಿದಂತಾಗುತ್ತದೆ”.

“ಇಷ್ಟೇಕೆ. ಇನ್ನು ಒಂದೆರಡುವಾರ ಇಲ್ಲೇ ಇದ್ದುಬಿಡೋಣವಾಗಲಿ”.

“ನಾನು ಬಡವ. ಮನೇಕಡೆ ನೋಡಿಕೊಳ್ಳುವವರು ಯಾರೂ ಇಲ್ಲ. ಈ ಪುಸ್ತಕ ಕೊನೆಗೆ ಅಚ್ಚಾಗುತ್ತದೋ ಇಲ್ಲವೋ ಹೇಳಲು ಸಾಧ್ಯವಿಲ್ಲ. ‘ಅರಿಶಿನದ ಕೂಳು ನೆಚ್ಚಿಕೊಂಡು ವರ್ಷದ ಕೂಳು ಕಳೆದುಕೊಂಡರು’ ಎಂಬಂತೆ, ಊರಿನ ನನ್ನ ಕೆಲಸ ಈ ಕಾಲವಿಳಂಬದಿಂದ ಕೆಡಬಹುದು”.

ಈ ಮಾತುಗಳನ್ನು ಕೇಳಿ ಶರ್ಮರ ಮನಸ್ಸಿಗೆ ಏನೋ ಒಂದು ಅಭಿಪ್ರಾಯ ಹೊಳೆಯಿತು. ಮುಖ ಸ್ವಲ್ಪ ಅರಳಿತು “ ತಾವು ಇಲ್ಲಿಗೆ ಮರಳಿ ಬರುವ ತೊಂದರೆಯನ್ನು ನಾನು ತಪ್ಪಿಸಬೇಕೆಂದಲ್ಲವೆ ತಮ್ಮ ಅಭಿಪ್ರಾಯ ”.

“ ಹೌದು ”.

“ ನಾನು ನೋಡಿದ್ದರಲ್ಲಿ ತಮ್ಮ ಗ್ರಂಥ ಅಚ್ಚಾದರೆ ಸುಮಾರು ಇನ್ನೂರು ಪುಟಗಳಷ್ಟಾಗಬಹುದು. ಅಲ್ಲವೆ ” ?

“ ನನಗೆ ಅದರ ಅನುಭವವಿಲ್ಲ. ಈಗ ಆ ಯೋಚನೆ ಏಕೆ ” ?

“ ಹೇಳುತ್ತೇನೆ ಸ್ವಲ್ಪ ಇರಿ. ಅಂತಹ ಗ್ರಂಥಕ್ಕೆ ಎಷ್ಟು ಹೆಚ್ಚೆಂದರೂ ಬೆಲೆ ಎರಡು ರೂಪಾಯಿ ಹಾಕಬಹುದು. ಪ್ರಕಟಣಕಾರರು ಮೊದಲನೆಯ ಮುದ್ರಣದಲ್ಲಿ ಒಂದು ಸಾವಿರಕ್ಕಿಂತ ಹೆಚ್ಚು ಮುದ್ರಿಸುವುದಿಲ್ಲ. ಗ್ರಂಥ ಕರ್ತರಿಗೆ ಅತಿಹೆಚ್ಚೆಂದರೆ ನಿಯತ ಬೆಲೆಯ ಶೇಕಡ ಮೂವತ್ತೈದರಷ್ಟು ಕೊಡಬಹುದು. ತಮಗೂ ಟಾನಸ್ಲೇಯವರಿಗೂ ಇರುವ ಮಿತ್ರತ್ವದಿಂದ ಅವರು ತಮಗೆ ಶೇಕಡ ನಲವತ್ತರಷ್ಟು ಕೊಡಿಸಬಹುದು. ಅದೂ ಪುಸ್ತಕ ಮಾರಾಟವಾದಹಾಗೆ ವರ್ಷಕ್ಕೊಂದುಸಲ ನಿಮಗೆ ಕೊಡಲಾಗುತ್ತೆ. ಈ ಲೆಕ್ಕದ ಪ್ರಕಾರ ಒಟ್ಟನಲ್ಲಿ ಎಲ್ಲ ಪ್ರತಿಗಳೂ ಖರ್ಚಾಗುವ ಹೊತ್ತಿಗೆ ತಮಗೆ ಎಂಟುನೂರು ರೂಪಾಯಿಗಳು ಸಂದಾಯವಾಗುತ್ತವೆ. ಅಲ್ಲವೇ ” ?

“ ಮೊದಲೇ ನಾನು ತಮ್ಮಲ್ಲಿ ಅರಿಕೆ ಮಾಡಿಕೊಂಡೆ. ನನಗೆ ಇದರಲ್ಲಿ ಪರಿಶ್ರಮವಿಲ್ಲ. ಇದೆಲ್ಲಾ ಲೆಕ್ಕಾಚಾರ ಮಾಡುವುದು ಗಾಳಿಯಲ್ಲಿ ಗೋಪುರ ಕಟ್ಟಿದಹಾಗಲ್ಲವೆ ” ?

“ ಹಾಗಲ್ಲ ಸ್ವಲ್ಪ ಕ್ಷಮಿಸಿ, ಐದು ನಿಮಿಷಗಳಲ್ಲಿ ಬರುತ್ತೇನೆ ” ಎಂದು ಹೇಳುತ್ತಾ, ಒಳಕ್ಕೆ ಎದ್ದುಹೋದರು. ಒಂದೆರಡು ನಿಮಿಷಗಳಲ್ಲಿ ಹೊರಗೆ ಬಂದು ಕೈಲಿದ್ದ ಲಕ್ಕೋಟೆಯನ್ನು ಶಿವರಾಮಯ್ಯನವರ ಮುಂದಿಟ್ಟರು. “ ತಮಗೆ ನನ್ನ ಕೈಲಾದಷ್ಟು ಸಹಾಯ ಮಾಡಲು ಅವಕಾಶ ಕೊಟ್ಟರೆ

ಬಹಳ ಸಂತೋಷವಾಗುತ್ತದೆ. ಮುದ್ರಣಕಾರರಿಂದ ತಮಗೆ ಸಂದಾಯವಾಗಬಹುದಾದ ಹಣ ಅದರಲ್ಲಿದೆ. ಮುದ್ರಣಕ್ಕೆ ಸಂಬಂಧಪಟ್ಟ ಎಲ್ಲ ವ್ಯವಹಾರಗಳನ್ನೂ ನನಗೆ ಬಿಟ್ಟುಬಿಡಿ. ಪ್ರಕಟಣೆ ಆದಮೇಲೆ ಇದಕ್ಕೂ ಹೆಚ್ಚಿನ ಪ್ರತಿಫಲ ದೊರೆತರೆ ಅದನ್ನು ಸಂತೋಷದಿಂದ ತಮಗೆ ತಲುಪಿಸುತ್ತೇನೆ. ಈ ಏರ್ಪಾಟಿಗೆ ತಾವು ದಯವಿಟ್ಟು ಒಪ್ಪಬೇಕೆಂದು ನನ್ನ ವಿನಂತಿ".

ಬೇಕೆಂದೇ ಶರ್ಮರು ಪ್ರತಿಫಲವನ್ನು ಪ್ರಖ್ಯಾತ ಗ್ರಂಥಕರ್ತರೂ ನಿರೀಕ್ಷಿಸುವುದಕ್ಕಿಂತ ಹೆಚ್ಚಾಗಿಯೇ ಹೇಳಿದ್ದರು. ಅದೃಷ್ಟವಶದಿಂದ ಅಷ್ಟು ಹಣವೂ ಆದಿನ ಅವರಲ್ಲಿತ್ತು. ಶಿವರಾಮಯ್ಯನವರು ಇದಕ್ಕೆ ಖಂಡಿತ ಒಪ್ಪುವರೆಂಬ ನಿರೀಕ್ಷೆಯಿಂದ ಅವರ ಮುಖಚರ್ಯೆಯನ್ನೇ ನೋಡುತ್ತಾ ಕುಳಿತರು. ಶಿವರಾಮಯ್ಯನವರು, ಮಾತು ಈ ರೀತಿ ತಿರುಗುತ್ತದೆಂದು ನಿರೀಕ್ಷಿಸಿರಲಿಲ್ಲ. ಅಷ್ಟು ಹಣ ಒಟ್ಟಾಗಿ ಎದುರಲ್ಲಿ ಬಂದು ಪತ್ನಿಯು—ಹೊರಡುವ ಕಾಲದಲ್ಲಿ ಇದರಿಂದ ನಮಗೂ ಏನಾದರೂ ಅಲ್ಪಸ್ವಲ್ಪ ದುಡ್ಡು ಸಿಕ್ಕುವಹಾಗಿದ್ದರೆ ಅದಕ್ಕೆ ಕಲ್ಲುಹಾಕಿಕೊಳ್ಳಬೇಡಿ ಎಂದು—ಹೇಳಿದ ಮಾತು ಜ್ಞಾಪಕಕ್ಕೆ ಬಂದಿತು. ಮನಸ್ಸು ಸ್ವಲ್ಪ ಸೋತಿತೋ ಏನೋ—ಮುಖಭಾವವನ್ನೇ ಪರೀಕ್ಷಿಸುತ್ತಿದ್ದ ಶರ್ಮರಿಗೆ ಹಣ ತನ್ನ ಕೆಲಸಮಾಡಿ ತಮ್ಮ ಕಷ್ಟಸ್ಥಿತಿಯನ್ನು ತಪ್ಪಿಸಿತೆಂದು ಭಾಸವಾಗಿ ಮನಸ್ಸಿನಲ್ಲಿಯೇ ದೇವರಿಗೆ ಧನ್ಯವಾದಗಳನ್ನು ಅರ್ಪಿಸಲಾರಂಭಿಸಿದರು. ಮನಸ್ಸಿನ ತಳಮಳವನ್ನು ಒಂದು ಹತೋಟಿಗೆ ತರಲು ಶಿವರಾಮಯ್ಯನವರಿಗೆ ಒಂದೆರಡು ನಿಮಿಷಗಳು ಬೇಕಾಯಿತು. ಅನಂತರ "ಅನಾಮಧೇಯನಾದ ನಾನು ಬರೆದ ಪುಸ್ತಕ ಖರ್ಚಾಗಲು ಯುಗಗಳಾಗಬಹುದು. ಅದೂ, ಅದು ಅಚ್ಚಾದರೆ. ಈ ಏರ್ಪಾಟಿಗೆ ನನ್ನ ಮನಸ್ಸು ಒಪ್ಪುವುದಿಲ್ಲ. ಪುಸ್ತಕವನ್ನು ದಯವಿಟ್ಟು ನನಗೆ ಹಿಂದಕ್ಕೆ ಕೊಡಬೇಕೆಂದು ನನ್ನ ಪ್ರಾರ್ಥನೆ".

"ಸಾಧ್ಯವಿಲ್ಲದ ಕೆಲಸ ಮಾಡಬೇಕೆಂದು ಕೇಳಿದರೆ ಹೇಗಾಗುತ್ತದೆ. ನನ್ನ ಮಾತನ್ನು ತಾವು ನಡೆಸಿಕೊಟ್ಟರೆ ತಮಗೂ ಸುಖ, ನನಗೂ ಸಮಾಧಾನ. ಅದರಿಂದ ನನಗೇನೂ ನಷ್ಟವಿಲ್ಲ. ಹಾಗೆ ನಷ್ಟಸಂಭವಿಸುವ ಪಕ್ಷದಲ್ಲಿ ತಮಗೆ ತಿಳಿಸುತ್ತೇನೆ. ಆಗ ತಾವು ಅದನ್ನು ಸರಿಪಡಿಸಬಹುದು".

ಇನ್ನು ಈ ರೀತಿಯಲ್ಲಿ ಮಾತನಾಡುವುದರಿಂದ ಪ್ರಯೋಜನವಿಲ್ಲ ವೆಂದರಿತು ಶಿವರಾಮಯ್ಯನವರು "ಹೋಗಲಿ, ತಮ್ಮಿಂದ ಪುಸ್ತಕವನ್ನು ಹಿಂದಕ್ಕೆ ಕೊಡುವುದು ಸಾಧ್ಯವಿಲ್ಲದಿದ್ದರೆ ಬೇಡ. ನನಗೆ ಮತ್ತೊಂದುಸಲ ಅದನ್ನು ನೋಡಬೇಕೆಂದು ಮನಸ್ಸಾಗಿದೆ. ದಯವಿಟ್ಟು ಐದು ನಿಮಿಷ ಕೊಡಿ. ತಿರುಗಿ ಇಲ್ಲಿಯೇ ತಮಗೆ ಕೊಡುತ್ತೇನೆ".

"ಅದು ಈಗ ಸಿಕ್ಕುವಹಾಗಿಲ್ಲ. ನೋಡಬೇಕಾದಂತಹ ಅವಶ್ಯಕತೆ ಯೇನು"?

"ನನ್ನ ಗ್ರಂಥ ತಮ್ಮಲ್ಲಿ ಸುರಕ್ಷಿತವಾಗಿದೆಯೆ"?

"ಏಕೆ ಹೀಗೆ ಕೇಳುತ್ತೀರಿ? ಇಲ್ಲದೆ ಎಲ್ಲಿ ಹೋಗುತ್ತದೆ"?

"ಎಲ್ಲೂ ಹೋಗುವುದಿಲ್ಲ. ಆದರೆ, ಸ್ವಲ್ಪ ತೋರಿಸಿದರೆ ನನ್ನ ಮನ ಸ್ಸಿಗೆ ಸಮಾಧಾನ".

ಶರ್ಮರೂ ಈ ರೀತಿಯ ಸಾವೋಪಾಯದಿಂಗ ಶಿವರಾಮಯ್ಯನವ ರನ್ನು ಕಳುಹಿಸಲು ಸಾಧ್ಯವಿಲ್ಲವೆಂದರಿತು ಸ್ವಲ್ಪ ಗಡಸುಧ್ವನಿಯಲ್ಲಿ "ಈಗ ನಿಮ್ಮ ಮನಸ್ಸಿನ ಅಸಮಾಧಾನಕ್ಕೆ ಏನು ಕಾರಣ? ನಿಮ್ಮ ಪುಸ್ತಕವನ್ನು ನಾನು ತಿನ್ನಲು ಸಾಧ್ಯವೇ? ಈ ರೀತಿ ನೀವು ಮಾತನಾಡಬಾರದು".

"ಪುಸ್ತಕ ತಿನ್ನುವುದಿಲ್ಲ. ಈ ರೀತಿ ಕೇಳಲು ಕಾರಣವಿದ್ದುದರಿಂದ ಕೇಳಿದೆ".

"ಏನು ಕಾರಣ ಅದು?—ನಾನು ಸಲಿಗೆಯಿಂದ ಮಾತನಾಡಿ ನಿಮಗೆ ಸಹಾಯಮಾಡಲು ಹೊರಟದ್ದೇ ಕಾರಣ. 'ಪುಸ್ತಕ ನನ್ನ ಕೈಲಿ ಕೊಟ್ಟ ವರು ಬರಲಿ, ಅವರ ಸಂಗಡ ಅದರ ಪ್ರಸ್ತಾಪ' ಎಂದಿದ್ದರೆ ಇಷ್ಟು ಮಾತಿಗೆ ಅವಕಾಶವಿರುತ್ತಿರಲಿಲ್ಲ".

"ಕಾರಣ ತಾವು ಹೇಳಿದ್ದಲ್ಲ. ನನ್ನ ಪುಸ್ತಕ ಬೇರೆಕಡೆ ಅಚ್ಚಾಗು ತ್ತಿರುವುದೇ ಕಾರಣ".

ಶರ್ಮರಿಗೆ ಸಿಡಿಲು ಬಡಿದಂತಾಯಿತು. 'ಏನು? ಈ ಬ್ರಾಹ್ಮಣ ಅಗನ್ನು ಬೇರೆಕಡೆ ಅಚ್ಚು ಹಾಕಿಸುತ್ತಿದ್ದಾನೆಯೇ? ಮಹಾರಾಜರಿಗೆ ಆ ಅಚ್ಚಾಗ ಪ್ರತಿಯೊಂದು ಸಿಕ್ಕಿಗರೆ ನನ್ನ ಮರ್ಯಾದೆ ಎಷ್ಟಕ್ಕೆ ಬಂತು. ಅಯ್ಯೋ ದೇವರೇ! ಆ ದಿನ ನನಗೆ ಅಂತಹ ಬುದ್ಧಿ ಏಕೆ ಕೊಟ್ಟೆ'? ಎಂದು ಮನಸ್ಸಿನಲ್ಲಿ ಅಂಗುಕೊಳ್ಳುತ್ತಾ ಶಿವರಾಮಯ್ಯನವರ ಮೇಲೆ ನಿಜವಾಗಿಯೂ ಕೋಪಗೊಂಡು "ಹಾಗಾದರೆ ನೀವು ಪುಸ್ತಕದ ಇನ್ನೊಂದು ಪ್ರತಿ ಇಟ್ಟು ಕೊಂಡು, ಟಾನಸ್ಲೇಯವರಿಗೂ ನನಗೂ ಸುಳ್ಳುಹೇಳಿ ಈಗ ಅದನ್ನು ಬೇರೆ ಕಡೆ ಮುದ್ರಿಸುತ್ತಿದ್ದೀರಾ? ನೀವು ಬಹಳ ದೊಡ್ಡಮನುಷ್ಯರು" ಎಂದರು.

"ನೀವು ಊಹಿಸುವುದು ಸರಿಯಲ್ಲ. ನನ್ನಲ್ಲಿದ್ದುದು ಒಂದೇ ಪ್ರತಿ. ಅಗನ್ನೇ ತಮಗೆ ಕೊಟ್ಟುದು. ಈಗ ಆ ಪ್ರತಿಯೇ ನನ್ನ ತಿಳುವಳಿಕೆಗೆ ಬಾರದೆ ಮುದ್ರಾಶಾಲೆಗೆ ಹೋಗಿದೆ. ಕೆಲವು ಭಾಗ ಅಚ್ಚಾಗಿಯೂ ಇದೆ. ಅದು ಹೇಗೆ ಅಲ್ಲಿಗೆ ಹೋಯಿತೆಂದು ತಮ್ಮಿಂದ ತಿಳಿಯುವುದಕ್ಕೇ ನಾನು ಈಗ ಇಲ್ಲಿಗೆ ಬಂದಿರುವುದು".

ಶರ್ಮರಿಗೆ ಕೋಪ ನಿಜವಾಗಿಯೂ ಈಗ ಬಂತು. "ದಯವಿಟ್ಟು ಸುಳ್ಳುಮಾತುಗಳನ್ನಾಡಬೇಡಿ. ನಿಮ್ಮ ಅಭಿಪ್ರಾಯ ನಿಮ್ಮ ಪುಸ್ತಕ ನಾನು ಅಚ್ಚು ಹಾಕಿಸುತ್ತಿರುವೆನೆಂದೇನು"?

ಜೇಬಿನಿಂದ ಒಂದು ಅಚ್ಚಾದ ಹಾಳೆಯನ್ನು ತೆಗೆದು ತೋರಿಸುತ್ತಾ ಶಿವರಾಮಯ್ಯನವರು "ದಯವಿಟ್ಟು ಇದನ್ನು ತಾವು ಪರಾಂಬರಿಸಬೇಕು. ಇದು ನನ್ನ ಪುಸ್ತಕದ ಒಂದು ಭಾಗ ಅಹುದೋ ಅಲ್ಲವೋ? ಈ ಮುದ್ರಣಕ್ಕೆ ಹಸ್ತಪ್ರತಿ ಎಲ್ಲಿತ್ತು? ತಾವೇ ಹೇಳೋಣವಾಗಲಿ".

"ಹಾಳೆಯನ್ನು ಕೈಗೆ ತೆಗೆದುಕೊಂಡು ನೋಡುತ್ತಲೇ ಶರ್ಮರಿಗೆ ಆಕಾಶವೇ ಕಳಚಿ ತಲೆಯಮೇಲೆ ಬಿದ್ದಹಾಗಾಯಿತು. ತಲೆಯಮೇಲೆ ಕೈ ಹೊತ್ತುಕೊಂಡು ಕೊಂಚಕಾಲ ಸುಮ್ಮನೆ ಕುಳಿತುಬಿಟ್ಟರು. ಮಹಾರಾಜ ರಲ್ಲಿಗೆ ತಾವು ಕಳುಹಿಸಿದ ಪುಸ್ತಕ ಮುದ್ರಣಾಲಯಕ್ಕೆ ಹೇಗೆ ಹೋಯಿತು. ಆ ಮುದ್ರಣಾಲಯದವರ ಮೇಲೆ ದೂರು ಹೇಳಲು ಹೋದರೆ ತಮ್ಮ

ಕೃತ್ರಿಮ ಹೊರ ಬೀಳುವುದು. ಅರಮನೆಯ ಕಛೇರಿಯಲ್ಲಿ ಯಾರೋ ಮೋಸಮಾಡಿರಬೇಕು. ಈಗ ಏನು ಮಾಡುವುದು. ಈ ಶಿವರಾಮಯ್ಯ ನವರನ್ನು ಹೇಗೆ ಸಮಾಧಾನಮಾಡುವುದು. ಟಾನಸ್ಲೇಯವರಿಗೆ ಏನು ಉತ್ತರಕೊಡಬೇಕು. ವಿಚಾರತರಂಗಗಳ ಹೊಡೆತ ತಡೆಯಲಸಾಧ್ಯವಾಯಿತು. ಕೊನೆಗೆ ಸಣ್ಣ ಧ್ವನಿಯಲ್ಲಿ "ಇದು ಎಲ್ಲಿ ಮುದ್ರಣವಾಗುತ್ತಿದೆ ತಮಗೆ ಗೊತ್ತೇ"? ಎಂದು ಪ್ರಶ್ನಿಸಿದರು.

"ಮಹಾರಾಜರ ಸ್ವಂತ ಮುದ್ರಣಾಲಯದಲ್ಲಿ. ತಮ್ಮ ಹೆಸರಿನಲ್ಲಿ. ತಾವು ಮಾಡಿರುವ ಈ ಕೆಲಸ ನ್ಯಾಯವಾದುದೇ"?

ಮುದ್ರಣಾಲಯದ ಹೆಸರು ಕೇಳುತ್ತಲೇ ಶರ್ಮರಿಗೆ ಗಾಳಿ ಯಾವ ದಿಕ್ಕಿನಿಂದ ಬೀಸುತ್ತಿದೆಯೆಂಬುದು ಅರ್ಥವಾಯಿತು. ಗ್ರಂಥ ಮಹಾರಾಜರ ಮೆಚ್ಚುಗೆಗೆ ಪಾತ್ರವಾಗಿ ಮಹಾಸ್ವಾಮಿಗಳೇ ಅಚ್ಚುಹಾಕಿಸುತ್ತಿರಬೇಕು. ಈಗ ಏನು ಮಾಡುವುದು? ಶಿವರಾಮಯ್ಯನವರ ಮನಸ್ಸನ್ನು ಒಲಿಸಿಕೊಳ್ಳುವುದು ಬಿಟ್ಟು ಬೇರೇ ಉಪಾಯವೇ ಕಾಣಲಿಲ್ಲ. ಮನುಷ್ಯ ಬಡವ. ಹಳ್ಳಿಯವ; ಸಾತ್ವಿಕ. ಸ್ವಲ್ಪ ಹೆಚ್ಚು ಹಣಕೊಟ್ಟು ಆಸೆ ತೋರಿಸಿದರೆ ಸುಮ್ಮನಾಗಬಹುದೆಂದೆಣಿಸಿ "ಯಾವುದೋ ಸಂದರ್ಭದಲ್ಲಿ ಮಹಾರಾಜರಿಗೆ ನಿಮ್ಮ ಗ್ರಂಥ ಕಳುಹಿಸಿದೆ. ಪ್ರಮಾದವಶದಿಂದ ಅದು ನನ್ನ ಹೆಸರಿನಲ್ಲಿ ಅಚ್ಚಾಗುತ್ತಿದೆ. ನನ್ನ ಆತ್ಮಸಾಕ್ಷಿಯಾಗಿಯೂ ಹೇಳುತ್ತೇನೆ. ನಿಮಗೆ ಮೋಸಮಾಡಿ ನಿಮ್ಮ ಗ್ರಂಥವನ್ನು ನನ್ನ ಹೆಸರಿನಲ್ಲಿ ಪ್ರಕಟಿಸಿ ಹಣವನ್ನಾಗಲಿ ಪ್ರಖ್ಯಾತಿಯನ್ನಾಗಲಿ ಪಡೆಯಬೇಕೆಂದು ನಾನು ಯೋಚಿಸಲಿಲ್ಲ. ದೇವರು ಎರಡನ್ನೂ ಸಾಕಾಗಷ್ಟು ನನಗೆ ಕರುಣಿಸಿದ್ದಾನೆ. ಈಗ ಆದದ್ದು ಆಗಿಹೋಯಿತು. ನಿಮ್ಮ ಮನಸ್ಸು ನೋಯಿಸಲು ನನಗೆ ಇಷ್ಟವಿಲ್ಲ. ಲಕ್ಕೋಟೆಯಲ್ಲಿರುವ ಎಂಟುನೂರು ರೂಪಾಯಿಗಳ ಜೊತೆಗೆ ಇನ್ನೂ ಎರಡು ನೂರು ರೂಪಾಯಿಗಳನ್ನು ಕೊಡಲು ಸಿದ್ಧನಾಗಿದ್ದೇನೆ. ಅದೂ ನಿಮಗೆ ಸಾಲದೆಂದು ಕಂಡುಬಂದ ಪಕ್ಷದಲ್ಲಿ ನಿಮ್ಮ ಅಭಿಪ್ರಾಯ ದಯವಿಟ್ಟು ತಿಳಿಸಿ. ಸಾಧ್ಯವಾದಮಟ್ಟಿಗೆ ಅದರಂತೆ ನಡೆಯಲು ಸಿದ್ಧನಾಗಿದ್ದೇನೆ".

"ನಾನು ಬಡವನೇನೋ ಅಹುದು. ಪುಸ್ತಕ ಪ್ರಕಟವಾದರೆ ಅದ

ರಿಂದ ಪ್ರತಿಫಲ ನಿರೀಕ್ಷಿಸುತ್ತಿದ್ದುದೂ ಉಂಟು. ಆದರೆ ಪುಸ್ತಕ ಪ್ರಕಟಣೆಗೆ ಆಶಿಸುತ್ತಿದ್ದುದು ಬರೀ ಹಣದಾಸೆಗೇ ಅಲ್ಲ. ಕನ್ನಡ ಭಾಷಾ ಭಂಡಾರಕ್ಕೆ ಅಲ್ಪ ಸ್ವಲ್ಪ ಕಾಣಿಕೆ ಸಲ್ಲಿಸಿದವರ; ಸಲ್ಲಿಸುತ್ತಿರುವವರ; ಸಲ್ಲಿಸುವವರ ಹೆಸರುಗಳಲ್ಲಿ ನನ್ನದೂ ಒಂದಾಗಿರಬೇಕೆಂಬ ಬಯಕೆಯೇ ಹೆಚ್ಚಾಗಿದೆ. ಆದುದರಿಂದ ತಮ್ಮ ಅಭಿಪ್ರಾಯ ನನ್ನ ಮನಸ್ಸಿಗೆ ಹಿಡಿಯುವುದಿಲ್ಲ".

"ತಾವು ಹಣಕ್ಕಾಗಿ ಪುಸ್ತಕ ಬರೆದರೆಂದು ನಾನು ಅಭಿಪ್ರಾಯ ಪಡಲಿಲ್ಲ. ಮಿಂಚಿಹೋದ ಈ ಸಂದರ್ಭದಲ್ಲಿ ತಮಗೆ ಎಷ್ಟರಮಟ್ಟಿನ ಪರಿಹಾರವನ್ನು ಕೊಡಬಹುದೋ ಅಷ್ಟು ಕೊಡಲು ನಾನು ಸಿದ್ಧನಾಗಿದ್ದೇನೆಂದು ತೋರಿಸುವುದಕ್ಕೆ ಹಾಗೆ ಹೇಳಿದೆ. ಈಗ ತಮ್ಮಗು ನುರಿತ ಕೈ. ಮಸೆದು ಹರಿತಮಾಡಿದ ಕತ್ತಿಯಂತಹ ಬುದ್ಧಿ. ಕ್ಷಿಪ್ರದಲ್ಲಿಯೇ ಇದಕ್ಕೂ ಉತ್ತಮವಾದ ಗ್ರಂಥ ಈ ಎರಡರ ಮಿಳಿತದಿಂದ ಹೊರಬೀಳುವುದರಲ್ಲಿ ಸಂದೇಹವಿಲ್ಲ. ಅಂತಹುದನ್ನು ಪ್ರಕಟಿಸಿ ಪ್ರಪಂಚದ ಮುಂದಿಡಲು ನನ್ನ ಸಹಾಯ ತಾವು ಅಪೇಕ್ಷಿಸದೆಯೇ ಸಿದ್ಧವಾಗಿರುತ್ತದೆ. ಈ ಪುಸ್ತಕದಿಂದ ಬರಬೇಕಾಗಿದ್ದ ಯಶಸ್ಸಿಗಿಮ್ಮಡಿಯಾದ ಯಶಸ್ಸು ಇನ್ನೂ ಪಕ್ವವಾದ ತಮ್ಮ ಬುದ್ಧಿಯಿಂದ ಹೊರಬೀಳುವ ಆ ನೂತನ ಗ್ರಂಥದಿಂದ ದೊರೆಯುತ್ತದೆ. ಈಗ ನಾನು ತಮಗೆ ಅರ್ಪಿಸಿರುವ ಕಾಣಿಕೆ ಬರಲಿರುವ ಗ್ರಂಥದ ಮುದ್ರಣದ ವೆಚ್ಚದ ಮುಡುಪೆಂದು ದಯವಿಟ್ಟು ಸ್ವೀಕರಿಸಿ".

"ಕ್ಷಮಿಸಿ, ಹೆತ್ತಮಕ್ಕಳನ್ನು ಯಾರಾದರೂ ಬೆಲೆಗೆ ಮಾರುವರೆ? ಹಾಗೆ ಮಾಡಿದವರು ಶೀಲವಂತರೆಂದೆನಿಸಿಕೊಳ್ಳುವರೇ"?

"ಮಹನೀಯರನೇಕರು ಮಕ್ಕಳನ್ನು ದತ್ತು ಕೊಟ್ಟಿಲ್ಲವೇ"?

"ಹಿರಿಯ ಮಕ್ಕಳನ್ನು ಕೊಟ್ಟಿಲ್ಲ. ಅಲ್ಲವೆ ದತ್ತು ಕೊಡುವುದು ಒಂದು ಮಹತ್ತರದಾನ. ದಾನ ಕೊಡಲು ಮನಸ್ಸಿಗೆ ಒಂದು ಪರಿಶುದ್ಧತೆಬೇಕು. ಅದು ಈಗ ನನ್ನಲ್ಲಿಲ್ಲ. ನಾನು ಬಂದುದು ಪುಸ್ತಕದ ವಿಚಾರ ತಿಳಿಯುವುದಕ್ಕೆ. ಅಪ್ಪಣೆಯಾದರೆ ನಾನು ಹೊರಡುತ್ತೇನೆ".

"ತಮ್ಮ ಕೊನೆಯ ತೀರ್ಮಾನವೇನು"?

"ನನ್ನ ಹೆಸರಿನಲ್ಲಿ ಅಚ್ಚಾಗದ ಪುಸ್ತಕದಿಂದ ಉತ್ಪತ್ತಿಯಾಗುವ ಪಣವನ್ನು ತೆಗೆದುಕೊಳ್ಳಲು ಮನಸ್ಸು ಒಡಂಬಡುವುದಿಲ್ಲ. ಈ ಪುಸ್ತಕ ಹೋದರೂ ಹೋಗಲಿ ಇನ್ನೊಂದು ಬರೆಯುತ್ತೇನೆನ್ನುವಷ್ಟು ಉದಾರತೆ ಇನ್ನೂ ಮನಸ್ಸಿನಲ್ಲಿ ಮೂಡಿಲ್ಲ. ಹೆಚ್ಚಿಗೆ ಹೇಳಲಾರೆ".

"ಈಗ ಏನು ಮಾಡಬೇಕೆಂದಿರುವಿರಿ"?

"ನಾನೇನೂ ಹೇಳಲಾರೆ. ಅಚ್ಚಾಗುತ್ತಿರುವ ಪುಸ್ತಕ ನನ್ನ ಹೆಸರಿನಲ್ಲಿ ಹೊರಬೀಳುವಹಾಗೆ ಮಾಡಲು ನನ್ನ ಮನಸ್ಸಿಗೆ ಸಮರ್ಪಕವಾಗಿ ತೋರು ವಂತಹ ಪ್ರಯತ್ನವನ್ನು ತಾವು ಮಾಡಿದರೆ ನಾನು ಮಾಡಬೇಕಾದ ಕೆಲಸ ಏನೂ ಇರುವುದಿಲ್ಲ. ಇಲ್ಲದಿದ್ದರೆ ನನ್ನ ಅನುಭವಸ್ಥರಾದ ಹಿತಚಿಂತಕರು ಯಾವರೀತಿ ಹೇಳುತ್ತಾರೋ ಆರೀತಿ ಮಾಡುತ್ತೇನೆ".

"ನಿಮ್ಮ ಆತ್ಮೀಯರಿಗೆ ನಾನು ಹೇಳಿದ ಎಲ್ಲ ವಿಚಾರಗಳನ್ನೂ ತಿಳಿಸಿರಿ. ಇದಕ್ಕೆ ನೀವು ಒಪ್ಪುವುದರಿಂದ ಆಗುವ ನಷ್ಟಕ್ಕಿಂತಲೂ ಲಾಭವೇ ಹೆಚ್ಚು. ಗ್ರಂಥಪ್ರಕಟಣೆಯ ಕೆಲಸ ಕೈಮೀರಿ ಹೋಗಿದೆ. ಈಗ ಅದನ್ನು ಸರಿಪಡಿಸುವುದು ಅಸಾಧ್ಯವೆಂದೇ ಹೇಳಬೇಕು. ಇದನ್ನು ಇಷ್ಟಕ್ಕೇ ಬಿಟ್ಟರೆ ನನಗೆ ದೊಡ್ಡ ಉಪಕಾರ ಮಾಡಿದಂತಾಗಿ ನನ್ನನ್ನು ನಿಮ್ಮ ಹಿತಚಿಂತಕರ ಗುಂಪಿಗೆ ಸೇರಿಸಿಕೊಳ್ಳುತ್ತೀರೆಂಬುದನ್ನು ಮರೆಯಬೇಡಿರಿ. ಇನ್ನೊಮ್ಮೆ ಹೇಳುತ್ತೇನೆ. ನಿಮ್ಮ ಗ್ರಂಥ ನನ್ನ ಕೈಬಿಟ್ಟು ಹೋದಾಗ ಅದು ಪ್ರಕಟವಾಗುವುದೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ. ಇದು ದೈವೇಚ್ಛೆಯಿಂದ ಆಗಿರುವ ಕೆಲಸ. ನನ್ನ ಪ್ರಾರ್ಥನೆಯನ್ನಂಗೀಕರಿಸಿ ಇದನ್ನು ಇಲ್ಲಿಗೇ ಬಿಡಬೇಕೆಂದು ಮತ್ತೊಮ್ಮೆ ಪ್ರಾರ್ಥಿಸುತ್ತೇನೆ. ಇದರಮೇಲೆ ನಿಮ್ಮ ಇಷ್ಟ".

"ಮೊದಲೇ ಹೇಳಿದಂತೆ ನನ್ನ ಮಿತ್ರರ ಸಲಹೆ ಕೇಳಿ ಅದರಂತೆ ನಡೆಯುತ್ತೇನೆ. ತಮ್ಮಿಂದ ಪ್ರಸಕ್ತ ಪುಸ್ತಕದ ವಿಷಯದಲ್ಲಿ ಬೇರೆ ಯಾವ ಸಲಹೆಯೂ ಇಲ್ಲವೇ"?

"ಬಹಳ ಸಂಕೋಚದಿಂದ ಹೇಳಬೇಕಾಗಿದೆ—ಇಲ್ಲ".

"ನಾನು ಹೊರಡಲೇ"?

"ಆಗಬಹುದು. ನಮಸ್ಕಾರ"

## ೧೮

ಶರ್ಮರ ಮನೆಯಿಂದ ಹೊರಟ ಶಿವರಾಮಯ್ಯನವರ ಮನಸ್ಸಿನಲ್ಲಿ ನಾನಾ ಬಗೆಯ ಯೋಚನೆಗಳು ಮೂಡಲಾರಂಭಿಸಿದವು. ಹೆಸರು ಪಡೆದ ವಿದ್ವಾಂಸರು ಏಕೆ ಈರೀತಿ ಮಾಡಿದರು? ಅವರಿಗೆ ಹಣಕ್ಕಾಗಲಿ ಯಶಸ್ಸಿಗಾಗಲಿ ಕೊರತೆಯಿಲ್ಲ. ಗ್ರಂಥ ಬರೆಯುವ ಸಾಮರ್ಥ್ಯದಲ್ಲಿ ಅದ್ವಿತೀಯರೆಂದು ಲೋಕ ಹೊಗಳುತ್ತಿದೆ. ಏನೋ ಪ್ರಮಾದದಿಂದ ಹೀಗೆ ಆಗಿರಬೇಕು. ಈಗ ತಾವು ಪ್ರಯತ್ನಪಟ್ಟು ನಡೆದಿರುವ ವಿಚಾರ ಮಹಾರಾಜರಿಗೆ ತಿಳಿಸಿದರೆ ಅವರ ತೇಜೋವಧೆ ಮಾಡಿದಹಾಗಾಗುವುದಿಲ್ಲವೆ. ಚಿಕ್ಕಪ್ಪನವರು ಏನು ಹೇಳುವರೋ? ಪತ್ನಿ ಮೊದಲೇ ಹೇಳಿದ್ದಳು, ಪುಸ್ತಕಗಳ ಕಳ್ಳರೂ ಇರುವರೆಂದು. ಅಂದು ನಂಬದೆ ಆಕೆಯನ್ನು ಹಾಸ್ಯಮಾಡಿದ್ದಾಗಿತ್ತು. ಶರ್ಮರು ಕೊಟ್ಟಿದ್ದ ಹಣವನ್ನಾದರೂ ತಂದಿದ್ದರೆ—ಅದು ಏಕೋ ಮನಸ್ಸಿಗೆ ಒಪ್ಪಿಗೆಯಾಗಲಿಲ್ಲ. ಈಗ ಊರಿಗೆ ಹಿಂತಿರುಗಿಹೋಗಿ ಆಕೆಗೆ ಪ್ರವಾಸದ ಫಲವನ್ನು ತಿಳಿಸುವುದು ಹೇಗೆ. ಪಟೇಲರು ರಂಗೇಗೌಡ ಮೊದಲಾದವರಿಗೆ ಏನು ಹೇಳುವುದು. ಶರ್ಮರ ಮರ್ಯಾದೆ ಉಳಿಸಲು ಪ್ರಯತ್ನಿಸಿ ತಾವೇಕೆ ಎಲ್ಲರೂ ನಗುವಂತಹ ಸ್ಥಿತಿಯನ್ನು ಅಪ್ಪಿಕೊಳ್ಳಬೇಕು. ಒಂದುವೇಳೆ ಚಿಕ್ಕಪ್ಪನವರ ಸಲಹೆಯಂತೆ ಲಿಲ್ಲಿಯವರ ಮೂಲಕ ಪ್ರಯತ್ನಿಸಿ ಅದು ವಿಫಲವಾದರೆ ಆ ರೀತಿ ಪ್ರಯತ್ನಿಸಿದ್ದರ ಸಾರ್ಥಕವೇನು? ಒಂದೊಂದು ಮಾರ್ಗವನ್ನು ಅನುಸರಿಸಿದರೆ ಒಂದೊಂದು ಅಡಚಣೆ. ಇದೇ ಸರಿಯಾದ ಮಾರ್ಗವೆಂದು ನಿಷ್ಕರ್ಷಿಸುವುದು ಕಷ್ಟ. ಈ ಯೋಚನೆಗಳು ಬಗೆ ಹರಿಯುವ ಮುಂಚೆ, ಯಾವ ಮಾರ್ಗದಲ್ಲಿ ಬಂದೆ. ಯಾರುಯಾರನ್ನು ದಾರಿಯಲ್ಲಿ ನೋಡಿದೆ ಎಂಬ ಪರಿವೆಯೇ ಇಲ್ಲದೆ ಮನೆಗೆ ಬಂದು ಸೇರಿದರು.

ಇವರ ಬರವನ್ನೇ ಎದುರು ನೋಡುತ್ತಿದ್ದ ನಂಜಪ್ಪನವರು ನಡೆದ ಸಮಾಚಾರಗಳನ್ನೆಲ್ಲಾ ತಿಳಿದುಕೊಂಡು "ನಾನು ನಿನ್ನೆಯೇ ಹೇಳಲಿಲ್ಲ ವೇನಯ್ಯಾ! ಶರ್ಮರನ್ನು ನೋಡಿ ಪ್ರಯೋಜನವಿಲ್ಲವೆಂದು? ಗ್ರಂಥದ ಯೋಗ್ಯತೆಯನ್ನೂ ಗ್ರಂಥಕರ್ತನ ಸರಳ ಸ್ವಭಾವವನ್ನೂ ನೋಡಿ ಗ್ರಂಥ ಕರ್ತನಿಗೆ ನಯವಾದ ಮಖಮಲ್ಲಿನ ಟೋಪಿ ಹಾಕಿ ಮಹಾರಾಜರಿಂದ ತಮ್ಮ ಶಿರಸ್ಸಿಗೆ ಕಿರೀಟಧಾರಣೆ ಮಾಡಿಸಿಕೊಳ್ಳಬೇಕೆಂದು ಯೋಚಿಸಿರುವ ಮನುಷ್ಯ ನಿನ್ನ ಮುದ್ದುಮಾತುಗಳಿಗೆ ಬಗ್ಗುತ್ತಾನೆಯೇನಯ್ಯಾ? ಬೆಣ್ಣೆ ಕರಗಬೇಕಾದರೂ ಬಿಸಿ ತಟ್ಟಲೇಬೇಕು. ಏಳು ಹೋಗೋಣ" ಎಂದರು.

"ಚಿಕ್ಕಪ್ಪ, ನೀವು ಕೋಪಿಸಿಕೊಳ್ಳದಿದ್ದರೆ ಒಂದು ಮಾತು ಹೇಳು ತ್ತೀನೆ".

"ಏನು ಅಪ್ಪಣೆಯಾಗಲಿ"

"ಒಂದು ವೇಳೆ ನಾವು ಪಟ್ಟ ಪ್ರಯತ್ನ ವಿಫಲವಾದರೆ ನಮಗೆ ಬರುವ ಲಾಭವೇನು? ಅಚ್ಚಾಗುತ್ತಿರುವ ಪುಸ್ತಕದಲ್ಲಿ ನನ್ನ ಹೆಸರು ಸ್ವಲ್ಪ ದಣಿ. ಇದರಿಂದ ಶರ್ಮರ ತೇಜೋವಧೆಯಾಗುತ್ತದೆ. ಆತ ಆಸ್ಥಾನವನ್ನೇ ಬಿಟ್ಟು ಹೋಗಬೇಕಾದ ಸಂದರ್ಭ ಒದಗಬಹುದು ಸ್ವಲ್ಪ ಪ್ರಯೋಜನ ಕ್ಕಾಗಿ ಇಷ್ಟು ಅನರ್ಥ ಆ ಬ್ರಾಹ್ಮಣನಿಗೆ ಉಂಟುಮಾಡಬೇಕೇ"?

"ಸಾಕು ಬಿಡಯ್ಯ! ನಿನ್ನ ತತ್ವೋಪದೇಶ. ನಿನ್ನಂತಹವರು ಸನ್ಯಾಸಿ ಗಳಾಗಿರಬೇಕಾಗಿತ್ತೇ ಹೊರತು ಸಂಸಾರಿಗಳಾಗಬಾರದು. ಈ ಮಣ್ಣು ತಿನ್ನುವ ಕೆಲಸಮಾಡೆಂದು ಶರ್ಮರಿಗೆ ಯಾರು ಹೇಳಿದರು? ಉರಿಯುತ್ತಿ ರುವ ದೀಪ ಮುಟ್ಟಿದರೆ ಕೈ ಸುಡುತ್ತದೆ. ಅದರಲ್ಲಿ ದೀಪ ಹತ್ತಿಸಿದವರ ತಪ್ಪೇನು? ಕೂದಲು ನರೆತು, ಹಲ್ಲುಗಳೆಲ್ಲಾ ಬಿದ್ದುಹೋಗುವವರೆಗೂ ಈ ಪುರಾಣ ಕಟ್ಟಿಡು. ಈಗ ಏಳು. ಅಸ್ಪತ್ರೆಗೆ ಹೋಗೋಣ. ನೀನು ಬರೋದಿಲ್ಲಾ ಅಂದರೂ ಇಗೋ ನಾನು ಹೊರಟೆ. ಎಲ್ಲಾ ನಿನ್ನಂತಾಗಿ ಬಿಟ್ಟರೆ ಪ್ರಪಂಚ ಉದ್ಧಾರವಾದ ಹಾಗೇ ಆಯ್ತು. ಏನು ಬರುತ್ತೀಯೋ

ಇಲ್ಲವೋ"? ಎನ್ನುತ್ತಾ ನಂಜಪ್ಪನವರು ಅಂಗಿ ಟೋಪಿಗಳನ್ನು ಹಾಕಿಕೊಂಡು ಶಲ್ಯದ ಕಲಾಪತ್ತಿನ ಅಂಚು ಸರಿಯಾಗಿ ಹೊರಗಡೆ ಬರುವಂತೆ ಹೊದೆದುಕೊಂಡು ಕೈಲಿ ಬೆತ್ತವನ್ನು ಹಿಡಿದು ಹೊರಟರು. 'ಸುಂಟರಗಾಳಿಗೆ ಸಿಕ್ಕಿದ ತರಗೆಲೆಯಂತೆ' ಶಿವರಾಮಯ್ಯನವರೂ ಅವರನ್ನು ಅನುಸರಿಸಬೇಕಾಯಿತು.

ವಿಷಯಗಳನ್ನು ಕೇಳುತ್ತಾ ಹೋದಂತೆಲ್ಲಾ ಲಿಲ್ಲಿಯವರ ಬಿಳಿಯ ಮುಖವು ಕೆಂಪಾಗುತ್ತಾ ಬಂತು. ಕುರ್ಚಿಯನ್ನು ಬಿಟ್ಟೆದ್ದು ಇತ್ತಿಂದ ಅತ್ತ ಅತ್ತಲಿಂದ ಇತ್ತ ಓಡಾಡುತ್ತಾ "ಇದು ಏನು ನಂಬಿಕೆ ದ್ರೋಹ! ಹೆಂಡ್ರಿಕ್ಸ್ ಸರ್ಮರಲ್ಲಿ ಎಷ್ಟುಗೌರವ ನಂಬಿಕೆ ಇಟ್ಟುಕೊಂಡಿದ್ದರು. ಹೆಂಡ್ರಿಕ್ಸ್ ಈಗ ಎದ್ದು ಓಡಾಡುವ ಹಾಗೂ ಇಲ್ಲ. ಈಗ ಏನು ಮಾಡುವುದು ಈ ಅನ್ಯಾಯವನ್ನು ಹೇಗೆ ಸರಿಪಡಿಸುವುದು"! ಎಂದರು.

ನಂಜಪ್ಪನವರು "ನೋಡಿ ತಾಯಿ. ಈ ಅನ್ಯಾಯವನ್ನು ಕೇಳಿ ನಿಮಗೆ ಬಂದಷ್ಟು ಕೋಪ ನಮ್ಮ ಶಿವೂಗೆ ಬರಲಿಲ್ಲವಲ್ಲಾ ಏನು ಹೇಳೋಣ. ಅವನ ಅಭಿಪ್ರಾಯ ಇದನ್ನು ಹೀಗೆಯೇ ಬಿಟ್ಟುಬಿಡಬೇಕೆಂದು. ನಾವೇನಾದರೂ ಪ್ರಯತ್ನಮಾಡಿ ಇದನ್ನು ಬಯಲಿಗೆಳೆದರೆ ಆ ಬ್ರಾಹ್ಮಣನ ತೇಜೋವಧೆಮಾಡಿದಂತಾಗುತ್ತದೆಂದು ಹೆದರುತ್ತಾನೆ" ಎಂದರು.

"ತಪ್ಪುಮಾಡಿದವರನ್ನು ಸಿಕ್ಷಿಸದಿದ್ದರೆ ಅವರಿಗೆ ಉತ್ತೇಜನ ಕೊಟ್ಟ ಹಾಗೆ ಆಗಿ ಇನ್ನೂ ಹೆಚ್ಚು ಜನರು ಹೆಚ್ಚು ಹೆಚ್ಚು ಪಾಪಕಾರ್ಯಗಲನ್ನು ಮಾಡುತ್ತಾರೆ. ಆ ಪಾಪ ನಮಗೂ ಸ್ವಲ್ಪ ಬರುತ್ತದೆ. ಮಾಡಿದ ತಪ್ಪಿಗೆ ಶಿಕ್ಷೆ ಇಲ್ಲೇ ಅನುಭವಿಸಿದರೆ ಮುಂದೆ ಒಳ್ಳೆಯದಾಗುತ್ತದೆ. ತಪ್ಪುಮಾಡಿದವರನ್ನು ಹಾಗೇ ನಾವು ಬಿಟ್ಟರೆ ನಮ್ಮ ಕರ್ತವ್ಯ ನಾವು ಮಾಡಿದಂತೆ ಆಗುವುದಿಲ್ಲ".

"ತಪ್ಪೆಂದು ನಿಷ್ಕರ್ಶಿಸಿ ಶಿಕ್ಷೆಮಾಡುವವನು ಭಗವಂತ. ಆತನ ಕೆಲಸವನ್ನು ಮಾಡುವ ಧೈರ್ಯ ನಮಗೇಕೆ"? ಎಂದು ಶಿವರಾಮಯ್ಯನವರು ಹೇಳಿದರು.

"ನಿಮ್ಮ ಹಿಂದೂ ಧರ್ಮ ತಿಳಿಸುವುದಿಲ್ಲವೇ–ಎಲ್ಲರಲ್ಲೂ ನಾರಾಯಣ ನಿದ್ದಾನೆಂದು. ನಿಮ್ಮಲ್ಲಿರುವ ನಾರಾಯಣ ಆ ಕೆಲಸ ಮಾಡುತ್ತಾನೆ" ಎಂದು ಹೇಳಿ ಮುಗುಳ್ನಗೆ ನಗುತ್ತಾ "ದೇವರ ಮೇಲಿನ ಭಾರವನ್ನು ಆದಷ್ಟು ನಾವು ಕಡಮೆ ಮಾಡಬೇಕು. ಈ ಸಂದರ್ಭದಲ್ಲಿ ನಾವು ಶಿಕ್ಷೆ ಮಾಡುವುದೂ ಇಲ್ಲ, ನ್ಯಾಯ ಅನ್ಯಾಯಗಲನ್ನು ನಿಷ್ಕರ್ಷಿಸುವುದೂ ಇಲ್ಲ. ವಿಷಯ ಹೀಗಿದೆಯೆಂದು ನ್ಯಾಯಮೂರ್ತಿಗಳ ಮುಂದೆ ಇಡೋಣ. ಅವರು ಹೇಗೆ ಬೇಕಾದರೂ ಮಾಡಲಿ. ಹೀಗೆ ಮಾಡಿದರೆ ನಿಮ್ಮ ಅನುಮಾನಕ್ಕೆ ಅವಕಾಶ ಇಲ್ಲ ಅಲ್ಲವೆ"? ಎಂದರು.

"ಶಿವು ಪ್ರಪಂಚದಲ್ಲಿ ಈಗ ಕಣ್ಣು ಬಿಡುತ್ತಿದ್ದಾನೆ. ಈಗ ಮುಂದಿನ ಕ್ರಮ ಯಾವರೀತಿ ನಡೆಸೋಣ"?

"ನ್ಯಾಯಾಧಿಪತಿಗಳಲ್ಲಿ ದೂರು ಕೊಡೋಣ. ಅವರು ಎಲ್ಲಾ ವಿಚಾರಿಸುತ್ತಾರೆ".

"ಸಾಮಾನ್ಯವಾದ ಅನ್ಯಾಯವಾಗಿದ್ದರೆ ಹಾಗೆ ಮಾಡಬಹುದಾಗಿತ್ತು. ಮಹಾರಾಜರ ಹೆಸರೂ ಬರಬೇಕಾಗುತ್ತದೆ. ಅಪಾದಿತರು ವಿದ್ವಾಂಸರು. ದೂರು ಹೇಳುವವನು ಅನಾಮಧೇಯ. ಹಾಗೇ ಯೋಚಿಸುತ್ತಾ ಹೋದರೆ ನ್ಯಾಯಾಸ್ಥಾನಗಲ್ಲಿ ಗ್ರಂಥದ ಸ್ವಾಮಿತ್ವವನ್ನು ಸ್ಥಾಪಿಸುವುದಕ್ಕೆ ಅನೇಕ ಅಡಚಣೆಗಳಿವೆ".

"ಹಾಗಾದರೆ ತಮ್ಮ ಅಬಿಪ್ರಾಯವೇನು"?

"ದೂರನ್ನು ನೇರವಾಗಿ ಮಹಾರಾಜರಲ್ಲಿಗೇ ತೆಗೆದುಕೊಂಡು ಹೋಗೋಣ"

"ಅದು ಹೇಗೆ ಸಾಧ್ಯ"?

"ತಾವು ಸಹಾಯಮಾಡಿದರೆ ಆಗುತ್ತದೆ".

"ನಾನು ಏನುಮಾಡಬೇಕು. ತಿಳಿಸಿ"

"ತಮಗೆ ರಾಣೀವಾಸದಲ್ಲಿ ಬಳಕೆ ಇದೆ. ಆ ಮೂಲಕ ಮಹಾರಾಜರಿಗೆ ಈ ವಿಷಯಗಳನ್ನೆಲ್ಲಾ ವಿಶದವಾಗಿ ಒಂದು ಪತ್ರದಲ್ಲಿ ಬರೆದು ಮಹಾಸ್ವಾಮಿಗಳಿಗೆ ತಲುಪಿಸಿದರೆ ನಮ್ಮ ಕೆಲಸ ಆದಂತೆಯೇ ಸರಿ".

ಲಿಲ್ಲಿಯವರು ಸ್ವಲ್ಪಹೊತ್ತು ಸುಮ್ಮನೆ ಕುಳಿತರು. ಆ ಮಾರ್ಗವನ್ನು ಅನುಸರಿಸುವುದರಿಂದ ಉಂಟಾಗುವ ಸಾಧಕ ಬಾಧಕಗಳನ್ನು ತೂಗಿ ನೋಡಿದರು. "ಗ್ರಂಥ ಶಿವರಾಮಯ್ಯನವರದು ಎಂದು ಮಹಾರಾಜರು ತೀರ್ಮಾನಿಸಲು ನಾವು ಏನು ಗುರುತು ಕೊಡಬಹುದು"? ಎಂದರು.

"ಶಿವಣ್ಣನ ವಿಚಾರ ಎಲ್ಲಾ ತಿಳಿಸಬೇಕು. ಗ್ರಂಥದ ವಿಷಯ ಗ್ರಂಥದಲ್ಲಿರುವ ಚಿತ್ತಾಕರ್ಷಣೀಯವಾದ ಭಾಗಗಳಲ್ಲಿ ಅಲ್ಲಿ ಕೆಲವು ಇಲ್ಲಿ ಕೆಲವು ಈತನು ಹೇಳಲು ಸಿದ್ಧನಾಗಿದ್ದಾನೆ. ಪುಸ್ತಕ ಬರೆದು ಅನೇಕಾವರ್ತಿ ಪುನರಾವಲೋಕಿಸಿರುವ ಈತನಿಗೆ ಗ್ರಂಥವೆಲ್ಲವೂ ಹೆಚ್ಚು ಕಡಿಮೆ ಕಂಠಪಾಠವಾಗಿದೆ. ಅಚ್ಚಾಗುತ್ತಿರುವ ಪುಸ್ತಕದ ಹಸ್ತಪ್ರತಿಯೂ ಈತನ ಅಕ್ಷರದಲ್ಲೇ ಇರಬೇಕು".

"ಅದು ಹೇಗೆ ನಂಬುವದಕ್ಕಾಗುತ್ತದೆ"?

"ಶರ್ಮರು ಅದರ ನಕಲು ಮಾಡಿದ್ದರೆ ಈತನ ಪುಸ್ತಕವನ್ನು ಈತನಿಗೆ ತೋರಿಸಬಹುದಾಗಿತ್ತು".

"ನಿಜ, ತಾವು ದಯವಿಟ್ಟು ಮಹಾರಾಜರಿಗೆ ಕನ್ನಡದಲ್ಲಿ ಬರೆಯುವಂತಹ ಎಲ್ಲಾ ವಿಚಾರಗಳನ್ನೂ ವಿವರಿಸಿ ಒಂದು ಪತ್ರ ಬರೆದುಕೊಡಿರಿ. ಅರಮನೆಗೆ ಆಳನ್ನು ಕಳುಹಿಸಿ ಯಾವಾಗ ನೋಡಲು ಸಮಯವಾಗುತ್ತದೆಂಬುದನ್ನು ತಿಳಿದುಕೊಳ್ಳುತ್ತೇನೆ ಆದಷ್ಟು ಜಾಗ್ರತೆ ಪತ್ರತರುತ್ತೀರಾ"?

"ಆಗಲಿ ತಾಯಿ, ಇನ್ನೊಂದು ಗಂಟೆಯೊಳಗೆ ಅದನ್ನು ತಮಗೆ ತಲುಪಿಸುತ್ತೇನೆ".

"ಟಾನಸ್ಲೇ ಮತ್ತು ಜಾನಯ್ಯನವರ ದೇಹಸ್ಥಿತಿ ಹೇಗಿದೆ ತಾಯಿ? ಅವರನ್ನು ಸ್ವಲ್ಪ ನೋಡಿಕೊಂಡು ಬರೋಣವೇ"? ಎಂದು ಶಿವರಾಮಯ್ಯನವರು ಮೇಲಕ್ಕೆದ್ದರು.

"ಇಬ್ಬರ ಸ್ಥಿತಿಯೂ ಉತ್ತಮಗೊಲ್ಲುತ್ತಿದೆ. ಬನ್ನಿರಿ, ಒಲಗೆ ಹೋಗೋಣ. ಅವರು ಮಾತನಾಡಬಾರದೆಂದು ವೈದ್ಯರು ಕಟ್ಟಪ್ಪಣೆ ಮಾಡಿದ್ದಾರೆ" ಎಂದು ಹೇಳುತ್ತಾ ಇಬ್ಬರನ್ನೂ ಆಸ್ಪತ್ರೆಯೊಳಕ್ಕೆ ಕರೆದುಕೊಂಡು ಹೋದರು.

× × × ×

ಅಂದೇ ಸಾಯಂಕಾಲ ಐದುಗಂಟೆಯಹೊತ್ತಿನಲ್ಲಿ ಅರಮನೆಯ ಮೋಟಾರೊಂದು ಆಸ್ಪತ್ರೆಯ ಹತ್ತಿರ ಬಂದು ಲಿಲ್ಲಿಯವರನ್ನು ಅರಮನೆಗೆ ಕರೆದುಕೊಂಡು ಹೋಯಿತು. ತಿರುಗಿ ಆರು ಗಂಟೆಗೆ ಅದೇ ಮೋಟಾರು ಆಕೆಯನ್ನು ಹಿಂದಕ್ಕೆ ಕರೆದುಕೊಂಡುಬಂದು ಬಿಟ್ಟಿತು. ಹೋಗುವಾಗ ಇದ್ದುದಕ್ಕಿಂತಲೂ ಹಿಂತಿರುಗಿಬಂದು ಮೋಟಾರಿನಿಂದ ಇಳಿಯುವಾಗ ಲಿಲ್ಲಿಯವರ ಮುಖ ಗೆಲುವಾಗಿದ್ದಿತು. ಒಳಗೆ ಹೋದ ಅರ್ಧ ಗಂಟೆಯಲ್ಲಿ ಮೆಥೂಸಲನು ಒಂದು ಲಕ್ಕೋಟೆಯನ್ನು ಕೈಲಿ ತೆಗೆದುಕೊಂಡು ನಂಜಪ್ಪನವರ ಮನೆಯ ಕಡೆ ಹೊರಟನು.

## ೧೯

ಬೆಳಗ್ಗೆ ಒಂಬತ್ತುಗಂಟೆಯ ಸಮಯ. ನಂಜಪ್ಪನವರ ಮನೆಯಲ್ಲಿ ಹಿಂದಿನ ಸಾಯಂಕಾಲ ಲಿಲ್ಲಿಯವರಿಂದ ಬಂದಿದ್ದ ಪತ್ರದ ಚರ್ಚೆ ನಡೆಯುತ್ತಿತ್ತು. ಆಗ ಚಿಕ್ಕಶಿವು ನಡುವೆ ಬಂದು "ಬಬ್ಬು ಹೋಗೋಣ ಬಾ" ಎಂದು ಪೀಡಿಸಲಾರಂಭಿಸಿದನು. ಯಾರು ಎಷ್ಟು ಹೇಳಿದರೂ ಪಟ ಬಿಡಲಿಲ್ಲ. ರಾಮಸ್ವಾಮಿಗೆ ಅಚ್ಚಾದ ಪುಟಗಳನ್ನು ಪುನರಾವಲೋಕಿಸುವ ಆತುರ. ಕೋಪ ಬಂದು ಮಗುವನ್ನು ಎತ್ತಿಕೊಂಡುಬಂದು ಹೊರಗಿನ ಸಣ್ಣಕೊಠಡಿಯಲ್ಲಿ ಕೂಡಿದನು. ಅಳು ಇನ್ನೂ ಜಾಸ್ತಿಯಾಯಿತು. ನಂಜಪ್ಪನವರೇ ಶಾಂತಿಸ್ಥಾಪನೆಗೆ ಮುಂದೆ ಬರಬೇಕಾಯಿತು. ಜೈಲಿನಿಂದ ಮಗುವನ್ನು ಬಿಡಿಸಿ ಹೆಗಲಮೇಲೆ ಮಲಗಿಸಿಕೊಂಡು ಮನೆಯಮುಂದೆ ಇತ್ತಿಂದತ್ತ ಅತ್ತಲಿಂದಿತ್ತ ಓಡಾಡಲಾರಂಭಿಸಿದರು. ಸ್ವಂತ ಮಕ್ಕಳ ಮೇಲಿರುವ ಪ್ರೀತಿಗಿಂತ ಮೊಮ್ಮಕ್ಕಳ ಮೇಲೆ ಪ್ರೀತಿ ಹೆಚ್ಚಾಗಿ ಇರುವುದು

ಸ್ವಾಭಾವಿಕವೆಂದು ಕಾಣುತ್ತದೆ. ಮಕ್ಕಳಿಗೂ ಅಷ್ಟೆ. ಅಜ್ಜ ಅಜ್ಜಿ, ಅದರಲ್ಲೂ ಅಜ್ಜನಲ್ಲಿ ಸಲಿಗೆ ಹೆಚ್ಚು. ತಮ್ಮ ಶರೀರವನ್ನೆ ಹೊತ್ತುಕೊಂಡು ಓಡಾಡುವುದು ಕಷ್ಟವೆನ್ನುವ ಮುದುಕರೂ ಮೂರುನಾಲ್ಕು ವರ್ಷ ವಯಸ್ಸಿನ ಮಕ್ಕಳನ್ನು—ಅವು ಓಡಾಡುವ ಸ್ಥಿತಿಯಲ್ಲಿದ್ದರೂ—ಹೆಗಲಮೇಲೇರಿಸಿಕೊಂಡು ಆ ಭಾರವನ್ನು ಲಕ್ಷಿಸದೆ ಎಷ್ಟು ದೂರ ಬೇಕಾದರೂ ಹೋಗುತ್ತಾರೆ. ನಂಜಪ್ಪನವರಿಗೆ ಮೊಮ್ಮಗನನ್ನು ಹೆಗಲಮೇಲೆ ಮಲಗಿಸಿಕೊಂಡು ಓಡಾಡುವುದೇನೂ ಹೊಸದಾಗಿರಲಿಲ್ಲ.

"ಬಬ್ಬಾ ಎಲ್ಲಿಗೆ ಹೋಗಬೇಕಪ್ಪ. ನಾನೂ ನೀನೂ ಹೋಗೋಣವಂತೆ. ದೊಡ್ಡಪ್ಪ ಕೆಟ್ಟೋನು. ಅವನ ಜೊತೇಲಿ ಬೇಡ".

"ನಿಜವಾಗಿಯೂ ಕರ್ಕೊಂಡು ಹೋಗ್ತೀಯಾ"?

"ನಾನು ನಿನಗೆ ಎಂದಾದರೂ ಸುಳ್ಳುಹೇಳಿದೀನೇನಪ್ಪ. ಎಲ್ಲಿಗೆ ಹೋಗೋಣ ಹೇಳು"?

"ಅವತ್ತು ಹೋಗಿದ್ವಲ್ಲಾ ಆ ಚಿಮ್ಮ ಹುಲಿ ಇರೋಬಳಿಗೆ ಹೋಗೋಣ" ಎನ್ನುತ್ತಾ ಉರುಳಿಗ ಕಣ್ಣೀರಿನ ಅರಳಿದ ಕಣ್ಣುಗಳಿಂದ ಮುಖದಲ್ಲಿ ಹರ್ಷವನ್ನು ಸೂಚಿಸುವ ಹಸುಳೆಯನ್ನು ನೋಡಿ ನಂಜಪ್ಪನವರು "ಆಗಲಪ್ಪ, ಆದರೆ ಈಗ ಅಲ್ಲಿ ಬಾಗಿಲು ಹಾಕಿರುತ್ತಾರೆ. ಸಾಯಂಕಾಲ ಹೋಗೋಣ. ನಿನಗೆ ಜ್ಞಾಪಕವಿಲ್ಲವೇ. ಅವತ್ತು ನಾವು ಸಾಯಂಕಾಲವೇ ಅಲ್ಲವೇ ಹೋಗಿದ್ದುದು"? ಎಂದರು.

ಅರಳಿದ ಮುಖ ಮುದುರಿತು. "ಊ, ಈಗಲೇ ಹೋಗೋಣ. ಬಾಗಿಲು ತೆಗೀರಿ ಅಂದ್ರೆ ತೆಗೀತಾರೆ".

"ಹಾಗಲ್ಲಪ್ಪ, ನಿನಗೆ ಗೊತ್ತಿಲ್ಲ. ಜವಾನರು ಬಂದಿರೋಲ್ಲ".

"ಯಾರು, ಆ ಕೆಂಪು ರುಮಾಲು ಬಿಳೀ ಅಂಗಿ ಹಾಕಿಕ್ಕೊಂಡಿರ್ತಾರಲ್ಲಾ ಅವರೇ"!

"ಹೋ! ಜಾಣ! ಅವರೇ. ನೋಡಿದ್ಯೋ ನಿಂಗೆಲ್ಲಾ ಗೊತ್ತು".

"ಅಗೋ ನೋಡು, ಅವನು ಇಲ್ಲೇ ಬರ್ತಾಇದಾನೆ. ಕರೆದು ಕೇಳೋಣ"?

ಅಷ್ಟು ಹೊತ್ತಿಗೆ ಸರಿಯಾಗಿ ಅರಮನೆ ಜವಾನನೊಬ್ಬನು ಆವರಣದ ಬಾಗಿಲಿಗೆ ಬಂದು "ಇದೇ ಅಲ್ಲವೇ ಬುದ್ಧೀ ರಾಮಸ್ವಾಮಯ್ಯನವರ ಮನೆ" ಎಂದನು.

"ಹೌನಪ್ಪ, ಏನು"?

"ಇಲ್ಲಿ ಶಿವರಾಮಯ್ಯನವರೆಂಬುವರು ಇದಾರೆಯೋ"?

"ಅರಮನೆಯ ಆಳು, ಶಿವೂ ಹೆಸರು ಹೇಳುತ್ತಾನೆ. ಲಿಲ್ಲಿಯವರ ಪ್ರಯತ್ನ ಫಲಿಸಿದೆ" ಎಂದುಕೊಳ್ಳುತ್ತಾ "ಇದಾರಪ್ಪ, ಏಕೆ. ಅವರನ್ನು ಕರೆಯಲೇ"?

"ಹಾಗೆ ಮಾಡಿ ಬುದ್ಧೀ. ಅವರಿಗೆ ಒಂದು ಕಾಗದ ತಲಪಿಸ ಬೇಕಾಗಿದೆ".

ಅಜ್ಞಾತದ ಹಾಳೆಗಳನ್ನು ಪರಿಶೀಲಿಸುತ್ತಿದ್ದ ಅಣ್ಣ ತಮ್ಮಂದಿರಿಬ್ಬರೂ ವರ್ತಮಾನ ಗೊತ್ತಾಗುತ್ತಲೇ ಎರಡೇ ಹೆಜ್ಜೆಗೆ ಹೊರಗೆ ಬಂದರು. ಆಳು ಕಾಗದವನ್ನು ಕೊಟ್ಟು "ಜವಾಬು ಬರಸಿಕೊಂಡು ಬರಲು ಅಪ್ಪಣೆ ಯಾಗಿದೆ" ಎಂದನು.

ಮಹಾರಾಜರು ಸ್ವಂತವಾಗಿ ಕಾಗದ ಬರೆದಿದ್ದರು. ಶ್ರೀಮತಿ ಲಿಲ್ಲಿ ಯವರಿಂದ ತಿಳಿದುಬಂದ ಕೆಲವು ವಿಷಯಗಳನ್ನು ದೃಢೀಕರಿಸಲು ಶಿವ ರಾಮಯ್ಯನವರ ಸಹಾಯ ಅವಶ್ಯಕವೆಂದೂ ಅದಕ್ಕಾಗಿ ಅವರು ಅಂದೇ ರಾತ್ರಿ ಎಂಟು ಗಂಟೆಯಹೊತ್ತಿಗೆ ಅರಮನೆಗೆ ಬಂದರೆ ಅನುಕೂಲವೆಂದೂ ಹಾಗೆ ಬರುವುದಕ್ಕೆ ಅನಾನುಕೂಲಗಳೇನೂ ಇಲ್ಲದಪಕ್ಷದಲ್ಲಿ ಕಾಗದವನ್ನು ತಂದಿರುವ ಜವಾನನೊಡನೆ ಸಮ್ಮತಿಯನ್ನು ಸೂಚಿಸಿ ಪತ್ರ ಕಳುಹಿಸ ಬೇಕೆಂದೂ, ಹೊತ್ತಿಗೆ ಸರಿಯಾಗಿ ಅರಮನೆಯಿಂದ ಒಂದು ಮೋಟಾರು

ಅವರ ಉಪಯೋಗಕ್ಕಾಗಿ ಬರುವುದೆಂದೂ ಈ ವಿಷಯಗಳೆಲ್ಲವನ್ನೂ ಗೋಪ್ಯ ವೆಂದು ಭಾವಿಸಬೇಕೆಂದೂ ಕಾಣಿಸಲ್ಪಟ್ಟಿತ್ತು. ಏನು ಉತ್ತರ ಬರೆಯ ಬೇಕೆಂದು ಬಹಳ ಹೊತ್ತು ಯೋಚಿಸಬೇಕಾಗಲಿಲ್ಲ. ಐದು ನಿಮಿಷಗ ಳೊಳಗೇ ಉತ್ತರವನ್ನೂ, ಎರಡು ದಿವಸ ಹಾಕಿಕೊಳ್ಳಬಹುದಾದಷ್ಟು ಅಡ ಕೆಲೆಯನ್ನೂ ಪಡೆದ ಜವಾನನು ಇಷ್ಟು ಅಡಕೆಲೆಯನ್ನು ಒದಗಿಸಿಕೊಟ್ಟ ಆ ಕಾಗದದಲ್ಲಿ ಏನು ಸಂತೋಷದ ಸಮಾಚಾರ ಇದ್ದಿತೋ ಎಂದು ಯೋಚಿಸುತ್ತಾ ಅರಮನೆಯ ಕಡೆ ತಿರುಗಿದನು.

ಆ ದಿನವೆಲ್ಲಾ ಶಿವರಾಮಯ್ಯನವರು ಪಾಠವನ್ನು ಕಲಿಯಬೇಕಾ ಯಿತು. ಅರಮನೆಗೆ ಹೋಗಬೇಕಾದರೆ ಬಟ್ಟೆ ಹೇಗೆ ಹಾಕಿಕೊಂಡು ಹೋಗಬೇಕು. ಮಹಾರಾಜರಿಗೆ ಯಾವರೀತಿ ಫಲ ಮಂತ್ರಾಕ್ಷತೆಯನ್ನು ರ್ಪಿಸಬೇಕು. ಅವರನ್ನು ಯಾವರೀತಿ ಸಂಬೋಧಿಸಬೇಕು. ಅವರು ಕೇಳ ಬಹುದಾದ ಪ್ರಶ್ನೆಗಳೇನಿರಬಹುದು. ಯಾವರೀತಿ ಉತ್ತರಗಳನ್ನು ಹೇಳ ಬೇಕು ಇತ್ಯಾದಿ ಎಲ್ಲವೂ ಕೂಲಂಕಷವಾಗಿ ಚರ್ಚಿಸಿ ನಿರ್ಧಾರವಾದುವು. ಊಟವಾದಮೇಲೆ ಸ್ವಲ್ಪಹೊತ್ತು ಮಲಗುತ್ತಿದ್ದ ನಂಜಪ್ಪನವರು ಶಿವರಾಮ ಯ್ಯನವರಿಗೆ ಬೇಕಾಗುವ ಶಾಲುಗಳನ್ನು ಸಂಪಾದಿಸಲು ತಮ್ಮ ಪರಿಚಿತರಾದ ಅರಮನೆಯ ವಿದ್ವಾಂಸರುಗಳ ಮನೆಗೆ ಓಡಾಡುವ ಸಡಗರದಲ್ಲಿ ಮಲಗುವು ದನ್ನು ಮರೆತರು. ಶಿವರಾಮಯ್ಯನವರನ್ನು ಕೊಠಡಿಯಲ್ಲಿ ಸೇರಿಸಿಕೊಂಡು ಪೇಟಾಸುತ್ತಿ ಶಾಲು ಹೊದಿಸಿ, ಆ ಹೊಸತರಹ ಉಡುಪಿನಲ್ಲಿ ಓಡಾಡಲು ಅಭ್ಯಾಸಮಾಡಿಸಿ, ತಾವೇ ಮಹಾರಾಜರೆಂದೂ ತಮ್ಮ ಎದುರಿಗೆ ಅರಮನೆ ಯಲ್ಲಿ ಯಾವರೀತಿ ನಡೆದುಕೊಳ್ಳುವಿರೆಂಬುದನ್ನು ಮಾಡಿ ತೋರಿಸಬೇಕೆಂದು ಹೇಳುತ್ತಾ ಹೊಸ ನಟನನ್ನು ತರಪೇತುಮಾಡಲು ನಾಟಕ ಮಂಡಲಿಯ ಮುಖ್ಯಸ್ಥನು ವಹಿಸುವ ಶ್ರಮಕ್ಕಿಂತಲೂ ಹೆಚ್ಚು ಶ್ರಮವನ್ನು ನಂಜಪ್ಪ ನವರು ವಹಿಸಿದ್ದರು. ತಮ್ಮ ಪಾತ್ರವನ್ನು ನಟಿಸಿ ತೋರಿಸಿದಾಗ ಅಕ ಸ್ಮಾತ್ತು ಗೋಡೆಯಲ್ಲಿ ತಗಲುಹಾಕಿದ್ದ ದೊಡ್ಡ ಕನ್ನಡಿಯಲ್ಲಿ ತಮ್ಮ ಪ್ರತಿ ಬಿಂಬವನ್ನು ನೋಡಿ ಹಿಡಿಯಲಾರದಷ್ಟು ನಗು ಬಂದು ಶಿವರಾಮಯ್ಯ ನವರು ನಕ್ಕು ಬಿಟ್ಟರು.

"ಏನಯ್ಯಾ ಹೀಗೆ ನಗುತ್ತೀಯೆ? ಮಹಾರಾಜರ ಎದುರಿಗೆ ಎಷ್ಟು ಗಂಭೀರವಾಗಿರಬೇಕು. ನಾಳೆ ನೀನೂ ಆಸ್ಥಾನ ವಿದ್ವಾಂಸನಾದರೆ ಇಂತಹ ಉಡುಪು ಹಾಕಿಕೊಳ್ಳುವುದು ನಿನಗೆ ಸಾಮಾನ್ಯವಾಗಿ ಇದೇ ಒಂದು ದೊಡ್ಡ ಸ್ಥಿತಿಕೆ ಎಂಗುಕೊಳ್ಳುತ್ತೀಯೆ. ಇನ್ನೂ ಕೆಲವುಸಲ ಕನ್ನಡಿಯಲ್ಲಿ ಮುಖ ನೋಡಿಕೊಂಡು ಎಷ್ಟು ನಗಬೇಕೋ ಅಷ್ಟೂ ಈಗಲೇ ಪೂರೈಸಿಬಿಡು. ಇಲ್ಲಿ ಒಂಗು ಕನ್ನಡಿ ಇದ್ದರೆ ಮಹಾರಾಜರ ಕೊಠಡಿಯಲ್ಲಿ ಎಲ್ಲೆಲ್ಲೂ ಕನ್ನಡಿಗಳಿರುತ್ತವೆ. ಅಲ್ಲಿ ನೀನು ಹೀಗೆ ನಕ್ಕರೆ ಏನು ಗತಿ"?

"ಇಲ್ಲ ಚಿಕ್ಕಪ್ಪ. ನೀವು ಹೇಳಿದಹಾಗೆ ಇನ್ನೂ ನಾಲ್ಕೈದುಸಲ ಈ ನನ್ನ ಹಾಸ್ಯೋತ್ಪನ್ನ ಮಾಡುವ ವೇಷವನ್ನು ಕನ್ನಡಿಯಲ್ಲಿ ನೋಡಿಕೊಳ್ಳುತ್ತೀನೆ. ಅದರ ನವೀನತೆ ಹೋಗಿಬಿಟ್ಟರೆ ಆಮೇಲೆ ನಗು ಬರುವುದಿಲ್ಲ. ನೀವು ಈಗ ಈ ಅಭ್ಯಾಸ ಮಾಡಿಸದಿದ್ದರೆ ರಾತ್ರಿ ಖಂಡಿತ ಅಭಾಸವಾಗುತ್ತಿತ್ತು".

"ಅದಕ್ಕೇನಯ್ಯ 'ಹೆಡ್ಡರಾದರೂ ದೊಡ್ಡವರ ಮಾತು ಕೇಳಬೇಕು' ಅನ್ನುವುದು. ನಿನ್ನ ಪುಸ್ತಕದ ವಿಷಯ ಎಲ್ಲಾ ಚನ್ನಾಗಿ ಜ್ಞಾಪಿಸಿಕೋ, ಯಾವ ಯಾವ ಭಾಗ ಮಹಾರಾಜರ ಅವಗಾಹನೆಗೆ ತರಬೇಕೆನ್ನುತ್ತೀಯೋ ಅದನ್ನೆಲ್ಲಾ ಒಂದು ಕಾಗದದ ಮೇಲೆ ಗುರುತು ಹಾಕಿಕೋ. ರಾಮು ಮನೆಗೆ ಬಂದಮೇಲೆ ಎಲ್ಲಾ ಇನ್ನೊಂದು ಸಾರಿ ಹೇಳಬೇಕು".

ರಾಮಸ್ವಾಮಿಯು ಕಛೇರಿಯಿಂದ ಬಂದ ನಂತರ ಶಿವರಾಮಯ್ಯನವರು ಕಲಿತ ಪಾಠ ಒಪ್ಪಿಸಿದರು. ಅಭಿನಯ ಸಮರ್ಪಕವೆಂದು ತಂದೆ ಮಕ್ಕಳಿಬ್ಬರೂ ಪ್ರಶಸ್ತಿಪತ್ರಿಕೆಯನ್ನು ಕೊಟ್ಟರು. ಎಲ್ಲವೂ ಆದಮೇಲೆ ಶಿವರಾಮಯ್ಯನವರು "ರಾಮು! ಮಹಾಸ್ವಾಮಿಗಳೇನಾದರೂ ಗ್ರಂಥ ಅಚ್ಚಾಗುತ್ತಿರುವುದು ನಿಮಗೆ ಹೇಗೆ ಗೊತ್ತಾಯಿತೆಂದು ಕೇಳಿದರೆ ಏನು ಹೇಳಲಿ"?

"ನಿಜವನ್ನು ಹೇಳಣ್ಣ. ಅಚ್ಚಾದ ಹಾಳೆಗಳನ್ನು ಮನೆಗೆ ತಂದು ಪರೀಕ್ಷಿಸಲು ಅನುಮತಿ ಪಡೆದೇ ನಾನು ತಂದಿರುತ್ತೇನೆ. ನೀನು ಆ ಕೆಲಸದಲ್ಲಿ ನನಗೆ ಸಹಾಯ ಮಾಡಿದ್ದರಲ್ಲಿ ತಪ್ಪೇನೂ ಕಾಣಲಿಲ್ಲ. ಆದರೆ

ನೀನು ನಿನ್ನ ಗ್ರಂಥದ ಭಾಗಗಳನ್ನು ಹೇಳುವಾಗ ಇದುವರೆಗೂ ಅಚ್ಚಾಗಿರುವ ಭಾಗದಲ್ಲಿರುವುದನ್ನು ಬಿಟ್ಟು ಮುಂದಿನದನ್ನು ಹೇಳು. ಇನ್ನೊಂದು ವಿಷಯ. ನೀನು ಸರಳ ಸ್ವಭಾವದವನು. ಯಾರ ವಿಷಯದಲ್ಲೂ ಕಠಿಣವಾಗಿ ಮಾತನಾಡುವುದಿಲ್ಲ. ಆದರೂ ನನ್ನ ಮನಸ್ಸಮಾಧಾನಕ್ಕಾಗಿ ಹೇಳುತ್ತೇನೆ. ಶರ್ಮರ ವಿಷಯ ಪ್ರಸ್ತಾಪಬಂದಾಗ ಅವರ ಮೇಲೆ ಯಾವ ಆರೋಪಣೆಯನ್ನೂ ಮಾಡಬೇಡ. ನಡೆದಿರುವ ವಿಚಾರ ಉಪ್ಪುಕಾರ ಹಚ್ಚದೆ ತಿಳಿಸು. ಪ್ರಭುಗಳಿಗೆ ಶರ್ಮರಮೇಲೆ ವಿಶ್ವಾಸ ಬಹಳ. ನಾವು ಪ್ರೀತಿಸುವ ಪದಾರ್ಥಗಳಲ್ಲಿ ದೋಷಗಳಿರಬಹುದು. ಆದರೆ ಅವನ್ನು ಇನ್ನೊಬ್ಬರು ಎತ್ತಿ ತೋರಿಸಿದರೆ ತೋರಿಸಿದವರ ಮೇಲೆ ಕೆಂಡದಂತಹ ಕೋಪ ಬರುವುದು ಸ್ವಾಭಾವಿಕ. ಇಂತಹ ದೋಷದಿಂದೊಡಗೂಡಿದ ವಸ್ತುವನ್ನು ಪ್ರೀತಿಸುತ್ತಿರುವೆನೆಂದು ನನ್ನನ್ನೇ ಈತನು ಅಲ್ಲಗಳೆಯುತ್ತಿರುವನೆಂಬ ಭಾವನೆಯುಂಟಾಗಿ ತಮ್ಮ ಆಯ್ಕೆಯನ್ನು ಸಮರ್ಥಿಸಿಕೊಳ್ಳಲೋಸುಗ ಆ ದೋಷಗಳನ್ನೊಪ್ಪಿಕೊಳ್ಳುವುದಿಲ್ಲ".

ಗೌರಮ್ಮನವರು ಬಂದು "ಅಡಿಗೆ ಆಗಿದೆ, ಎಲೆ ಹಾಕಲೇ"? ಎಂದರು.

"ಹಾಗೆ ಮಾಡು ಚಿಕ್ಕಮ್ಮ, ನಾನು ಬರುವುದು ಎಷ್ಟು ಹೊತ್ತಾಗುವುದೋ ಏನೋ. ನೀವೆಲ್ಲರೂ ನಾನು ಬರುವವರೆಗೂ ಏಕೆ ಕಾಯಬೇಕು" ಎಂದು ಹೇಳುತ್ತಾ ಶಾಲು ರುಮಾಲುಗಳನ್ನು ತೆಗೆದಿಟ್ಟು ಊಟಕ್ಕೆದ್ದರು.

## ೨೦

ಮೋಟಾರು ಶಿವರಾಮಯ್ಯನವರನ್ನು ಮನೆಗೆ ಹಿಂತಿರುಗಿ ಕರೆದುಕೊಂಡುಬಂದು ಬಿಟ್ಟಾಗ ಒಂಬತ್ತು ಗಂಟೆಯ ಮೇಲಾಗಿದ್ದಿತು. ಮನೆಯಲ್ಲಿ ಚಿಕ್ಕಶಿವು ಹೊರತು ಯಾರೂ ನಿದ್ದೆ ಹೋಗಿರಲಿಲ್ಲ. ಮೋಟಾರಿನ ಶಬ್ದವಾಗುತ್ತಲೇ ನಂಜಪ್ಪನವರು ಹೊರಗೆ ಬಂದು "ಬಾ ಶಿವು, ಏಕೆ

ಇಷ್ಟು ಹೊತ್ತಾಯಿತು " ? ಎಂದು ಕೇಳುತ್ತಾ ಶಿವರಾಮಯ್ಯನವರು ಇನ್ನೂ ಒಂದು ಹೆಜ್ಜೆ ಬಾಗಿಲ ಒಳಗೆ ಇಡುವುದಕ್ಕೆ ಮುಂಚೆಯೇ " ಹೋದ ಕೆಲಸ ಏನಾಯ್ತು " ? ಎಂದರು.

" ಹೇಳುತ್ತೇನೆ. ಬಾ ಚಿಕ್ಕಪ್ಪ ! ರಾಮುವಿನ ಕೊಠಡಿಗೆ ಹೋಗಿ ಮೊದಲು ಈ ಜೀನು ತೆಗೆದುಹಾಕಿದರೆ ನನಗೆ ಮಾತಾಡಲು ಸರಿಹೋಗುತ್ತದೆ " ಎನ್ನುತ್ತಾ ಕೊಠಡಿಗೆ ಅವರ ಸಂಗಡ ಹೊರಟರು. ಅವರ ಹಿಂದೆಯೇ ಗೌರಮ್ಮನವರೂ ಸರಸ್ವತಮ್ಮನವರೂ ಹೊರಟರು.

ಶಾಲು ರುಮಾಲುಗಳನ್ನು ತೆಗೆದಿಟ್ಟು ಒಂದು ಕುರ್ಚಿಯ ಮೇಲೆ ಕುಳಿತುಕೊಂಡು, ಮೇಜಿನಮೇಲಿದ್ದ ಒಂದು ರಟ್ಟಿನಿಂದ ಗಾಳಿ ಬೀಸಿಕೊಳ್ಳುತ್ತಾ " ನಾನು ಹೋಗುತ್ತಲು ಅರಮನೆಯ ಒಂದು ಕೊಠಡಿಗೆ ಬೆಳ್ಳಿ ಕಟ್ಟಿಗೆ ಹಿಡಿದಿದ್ದ ಒಬ್ಬ ಆಳು ನನ್ನನ್ನು ಕರೆದುಕೊಂಡು ಹೋದನು. ಕೊಠಡಿಯಲ್ಲಿ ಕಾಲಿಡುತ್ತಲೇ ನನಗೆ ನನ್ನ ಕಾಲುಗಳನ್ನು ತೆಗೆದು ತಲೆಯ ಮೇಲಿಟ್ಟುಕೊಂಡು ನಡೆಯಬೇಕೆನ್ನಿಸಿತು. ನಗಬೇಡಿ ಚಿಕ್ಕಮ್ಮ ! ನಿಜವಾಗಿಯೂ ಆ ಶುಭ್ರವಾದ ಬಣ್ಣಬಣ್ಣದ ರತ್ನಗಂಬಳಿಯಮೇಲೆ ನನ್ನ ಕೊಳಕು ಕಾಲುಗಳನ್ನು ಇಡಲು ಮನಸ್ಸೇ ಬರಲಿಲ್ಲ. ಸುತ್ತಲೂ ಮೆತ್ತೆಯ ಕುರ್ಚಿಗಳಿದ್ದುವು. ಎಲ್ಲ ಗೋಡೆಗಳಲ್ಲೂ ದೊಡ್ಡ ದೊಡ್ಡ ಕನ್ನಡಿಗಳು, ಲಕ್ಷ್ಮೀ, ಸರಸ್ವತಿ, ಚಾಮುಂಡಾಂಬಿಕೆ, ಚೆಲುವನಾರಾಯಣಸ್ವಾಮಿ, ಕಾಶೀವಿಶ್ವೇಶ್ವರ ಇವರ ಪಟಗಳು. ಹೊಳೆಯುವ ಸರಪಣಿಗಳಿಂದ ತೂಗುಹಾಕಲ್ಪಟ್ಟ ಕಂದೀಲುಗಳು. ಇದನ್ನೆಲ್ಲಾ ನೋಡುವುದರಲ್ಲಿ ನಿರತನಾಗಿದ್ದೆ. ನನಗೆ 'ಮಹಾಸ್ವಾಮಿ ಪರಾಕ್' ಎಂಬ ಶಬ್ದ ಕಿವಿಗೆ ಬೀಳದಿದ್ದರೆ ಆ ಕೊಠಡಿಯ ಇನ್ನೊಂದು ಬಾಗಿಲಿನಿಂದ ಮಹಾರಾಜರು ಪ್ರವೇಶಿಸಿದ್ದು ಗೊತ್ತೇ ಆಗುತ್ತಿರಲಿಲ್ಲ. ಚಿಕ್ಕಪ್ಪ ಹೇಳಿಕೊಟ್ಟಿದ್ದಂತೆ ಫಲಮಂತ್ರಾಕ್ಷತೆಗಳನ್ನು ಆಶೀರ್ವಾದಮಾಡಿ ಕೊಟ್ಟೆನು. ಮಹಾಸ್ವಾಮಿಯವರು ನಿಂತಿದ್ದ ಠೀವಿ, ಬೆಡಗು ಈಗಲೂ ಕಣ್ಣಿಗೆ ಕಟ್ಟಿದ ಹಾಗಿದೆ. ಪುಸ್ತಕಗಳಲ್ಲಿ ಓದಿದ್ದೆ– ರಾಜ ತೇಜಸ್ಸು, ರಾಜ ಠೀವಿ ಎಂದು. ಈ ದಿನ ಅದನ್ನು ಕಣ್ಣಿನಿಂದ ನೋಡಿದಹಾಗಾಯಿತು. ಆಶೀರ್ವಾದ ಮುಗಿದ ಮೇಲೆ ಮಹಾಸ್ವಾಮಿ

ಗಳು ನನ್ನನ್ನು ಒಂದು ಸುಖಾಸನದ ಮೇಲೆ ಕುಳಿತುಕೊಳ್ಳಹೇಳಿ ತಾವೂ ಹತ್ತಿರದಲ್ಲಿಯೇ ಒಂದು ಆಸನವನ್ನಲಂಕರಿಸಿದರು. ಯೋಗಕ್ಷೇಮವನ್ನೆಲ್ಲಾ ವಿಚಾರಿಸಿ ನಾನು ಈ ಪಟ್ಟಣಕ್ಕೆ ಬಂದ ಉದ್ದೇಶ ಇಲ್ಲಿ ನಡೆದ ಸಂಗತಿ ಎಲ್ಲಾ ವಿಚಾರಿಸಿದರು. ಅನಂತರ ಮಾತು ಬೇರೆ ಬೇರೆ ವಿಷಯಗಳ ಕಡೆಗೆ ತಿರುಗಿತು. ಅಶುಕವಿತೆಗಳ ಪ್ರಸ್ತಾಪ ಬಂದು ಮಹಾರಾಜರು ನನ್ನ ಗ್ರಂಥದ ವಿಷಯ ಅಶುಕವಿತೆಯನ್ನು ಮಾಡಬೇಕೆಂದು ಸೂಚಿಸಿದರು. ಹತ್ತಿರದ ಒಂದು ಮೇಜಿನಮೇಲೆ ಇದ್ದ ಲೇಖನ ಸಾಮುಗ್ರಿಗಳನ್ನು ಉಪ ಯೋಗಿಸಿಕೊಂಡು ಒಂದನ್ನು ಬರೆದು ಒಪ್ಪಿಸಿದೆನು. ಅದನ್ನು ನೋಡಿ ಚೆನ್ನಾಗಿದೆ ಎಂದು ಹೇಳುತ್ತಾ ಇದನ್ನು ನಾನು ಇಟ್ಟುಕೊಳ್ಳಲೇ ಎಂದು ಕೇಳಿದರು. ಅದಕ್ಕೆ ನಾನು ಸಂತೋಷದಿಂದ ಒಪ್ಪಿದೆನು. ಸ್ವಲ್ಪ ಹೊತ್ತು ಇತರ ಕವಿಗಳ, ಗ್ರಂಥಗಳ ವಿಚಾರ ಮಾತನಾಡಿದೆವು. ಆಮೇಲೆ ನಾನು ಊರಿಗೆ ಹೊರಡುವ ಪ್ರಸ್ತಾಪ ಬಂದಿತು. ಇನ್ನೆಂಟು ದಿವಸಗಳವರೆಗೂ ಹೊರಡಕೂಡದೆಂದೂ ಅಷ್ಟರಲ್ಲಿ ಅರಮನೆಯಿಂದ ವರ್ತಮಾನವೇನೂ ಬಾರ ದಿದ್ದಲ್ಲಿ ಹೊರಡಬಹುದೆಂದೂ ಅಪ್ಪಣೆಕೊಡಿಸಿದರು. ಅನಂತರ ಮಹಾ ಸ್ವಾಮಿಗಳ ಅಪ್ಪಣೆಪಡೆದು ನಾನು ಹೊರಟುಬಂದೆ".

"ಒಟ್ಟಿನಲ್ಲಿ ನಿನ್ನ ಅಭಿಪ್ರಾಯವೇನು"?

"ಮಹಾಸ್ವಾಮಿಗಳು ಪೂರ್ಣ ಪಂಡಿತರು ವಿದ್ಯಾಪಕ್ಷಪಾತಿಗಳು".

"ಅದಲ್ಲಯ್ಯಾ ನಾನು ಕೇಳಿದ್ದು. ಗ್ರಂಥ ನಿನ್ನದೆಂಬ ವಿಚಾರದಲ್ಲಿ ಅವರ ಅಭಿಪ್ರಾಯ"?

"ಸಾಗರದ ಆಳವನ್ನು ಗಜಕಡ್ಡಿಯಿಂದ ಅಳೆಯಲು ಸಾಧ್ಯವೇ? ನನ್ನಿಂದ ಅವರ ಮನಸ್ಸಿನಲ್ಲಿರುವುದನ್ನು ತಿಳಿಯಲು ಸಾಧ್ಯವಾಗಲಿಲ್ಲ. ಅದೂ ಅಲ್ಲದೆ, ನಾನು ಅವರೊಡನೆ ಮಾತನಾಡುತ್ತಿದ್ದಾಗ ಏತಕ್ಕಾಗಿ ಅಲ್ಲಿಗೆ ಹೋಗಿದ್ದೇನೆಂಬುದರ ಅರಿವೇ ನನಗಿರಲಿಲ್ಲ. ಈಗ ಜ್ಞಾಪಿಸಿ ಕೊಂಡರೆ ಅದರ ವಿಚಾರ ನಾವು ಮಾತನಾಡಿದ್ದು ಬಹಳ ಕಡಿಮೆ".

ಇದನ್ನೆಲ್ಲಾ ಕೇಳುತ್ತಲಿದ್ದ ಗೌರಮ್ಮನವರು "ಅನ್ನ ಆಗಿದೆಯೇ ನೋಡಲು ಎಲ್ಲ ಅಗಳುಗಳನ್ನು ನೋಡಬೇಕೆ? ಯಾವ ಪರೀಕ್ಷೆ ಮಾಡಬೇಕೆಂದು ಮಹಾರಾಜರು ಮನಸ್ಸುಮಾಡಿಕೊಂಡಿದ್ದರೋ ಅದನ್ನು ನಿನಗೆ ತಿಳಿಯದಂತೆ ಅವರು ಮಾಡಿರಬೇಕು ಇಲ್ಲದಿದ್ದರೆ ಇನ್ನು ಎಂಟು ದಿನ ಇರಬೇಕೆಂದು ಏಕೆ ಹೇಳುತ್ತಿದ್ದರು"? ಎಂದರು.

"ಅಮ್ಮನು ಹೇಳುವುದು ಸರಿಯೆಂದು ನನಗೂ ತೋರುತ್ತದೆ ಬಹುಶಃ ನಿನ್ನ ಅಶುಕವಿತೆಯಿಂದ ಅವರು ಎಲ್ಲಾ ನಿರ್ಧರಿಸುತ್ತಾರೆಂದು ನನ್ನ ಭಾವನೆ. ನೀನೇನು ಹೇಳುತ್ತೀಯಣ್ಣ"?

"ನಿಮ್ಮ ತಾಯಿ ಮಗನ ಸರದಿಯಾಯಿತು. ನನ್ನ ಸೊಸೆ ಏನು ಹೇಳುತ್ತಾಳೆ ಕೇಳೋಣ".

"ಇದೆಲ್ಲಾ ನನಗೇನು ತಿಳಿಯುತ್ತದೆ. ಇತರ ಪುಸ್ತಕಗಳ ವಿಚಾರ ಮಾತನಾಡಿರೋದು ನೋಡಿದರೆ ಭಾವನವರಿಗೆ ಇತರ ಕವಿಗಳ ವಿಚಾರದಲ್ಲಿ ಎಷ್ಟು ಗೊತ್ತಿದೆ? ಯಾವ ದೃಷ್ಟಿಯಿಂದ ಅವರ ಗ್ರಂಥಗಳನ್ನು ಓದಿದ್ದಾರೆ? ಎಂಬುದನ್ನು ನೋಡಿಕೊಂಡು ಇವರ ಪುಸ್ತಕವನ್ನು ಆ ದೃಷ್ಟಿಯಿಂದ ಬರೆದಿದ್ದಾರೆಯೇ ಎಂದು ಪರೀಕ್ಷಿಸಬಹುದು".

"ನೀವೆಲ್ಲರೂ ಹೇಳುವುದೂ ಸರಿಯೇ. ಮಹಾರಾಜರು ಏನೋ ಮಾತನಾಡುವವರ ಹಾಗೆ ತಮಗೆ ಬೇಕಾದ ಕವಿಯ ವಿದ್ಯೆ, ಭಾವನೆಗಳು, ಅವನ ಪುಸ್ತಕದ ಸಂಗತಿ ಎಲ್ಲವನ್ನೂ ಮುಂಕುಹಿಡಿದಿರುವ ನಮ್ಮ ಶಿವೂಗೆ ತಿಳಿಯದ ಹಾಗೆ ಕೇಳಿ ತಿಳಿದುಕೊಂಡಿದ್ದಾರೆ ಇವನ ಸ್ವಂತ ಅಕ್ಷರದಲ್ಲಿ ಅಶುಕವಿತೆ ಬರೆಸಿಕೊಂಡಿರುವುದು ಇವನ ಅಕ್ಷರಕ್ಕೂ ಅಚ್ಚಾಗುತ್ತಿರುವ ಹಸ್ತಪ್ರತಿಯ ಅಕ್ಷರಕ್ಕೂ ಹೋಲಿಸಿ ನೋಡುವುದಕ್ಕೆ. ಎಲ್ಲಾ ಅನುಕೂಲವಾಗುವಂತೆ ತೋರುತ್ತದೆ. ಇದರಮೇಲೆ ನಿನ್ನ ಅದೃಷ್ಟ".

"ನನ್ನ ಅದೃಷ್ಟ, ಕೂಲಿಮಠದ ಅಯ್ಯನಾಗಿರುವುದರಲ್ಲೇ ತಿಳಿಯುವುದಿಲ್ಲವೇ? 'ದೊರೆಯತನಕ ದೂರು' ಎಂದು ದೂರು ಹೇಳಿದ್ದಾಯಿತು.

ಆ ಸೇವದಲ್ಲಿ ರಾಜದರ್ಶನವೂ ಆಯಿತು. ಮಹಾಸ್ವಾಮಿಗಳೊಡನೆ ಸ್ವಲ್ಪ ಹೊತ್ತು ಸಂಭಾಷಣೆಮಾಡುವ ಯೋಗವಿತ್ತೆಂದು ಕಾಣುತ್ತದೆ. ಅದೂ ಮುಗಿದು ಹೋಯಿತು. ಈಗ ನನಗೆ ಊರಕಡೆ ಯೋಚನೆ ಹೆಚ್ಚಾಗಿದೆ".

ಹೊರಗಡೆ ಯಾರೋ "ಬಾಗಿಲು! ಬಾಗಿಲು!" ಎಂದು ಕೂಗಿದ ಹಾಗೂ ಬಾಗಿಲನ್ನು ಕೈಯಿಂದ ತಟ್ಟಿದಹಾಗೂ ಕೇಳಿಬಂತು. ಸರಸ್ವತಮ್ಮನವರು ನೋಡಿಕೊಂಡು ಬರುತ್ತೇನೆಂದು ಹೊರಡಲುದ್ಯುಕ್ತರಾದರು. ನಂಜಪ್ಪನವರು "ಚೆನ್ನಾಯಿತು, ಈ ಅವೇಳೆಯಲ್ಲಿ ನೀನು ಹೋಗಬೇಕೇ? ಬಾರದು. ನಾನು ಹೋಗಿ ನೋಡಿಕೊಂಡು ಬರುತ್ತೇನೆ" ಎಂದು ಹೊರಟರು.

ಎಲ್ಲರೂ ಮಾತನಾಡುವುದನ್ನು ನಿಲ್ಲಿಸಿದರು. ನಂಜಪ್ಪನವರು "ಯಾರು" ಎಂದು ಕೇಳಿದರು. "ನಾವು ಪರಸ್ಥಳ. ಇದೇ ರಾಮಸ್ವಾಮಯ್ಯನವರ ಮನೆಯೇ" ಎಂಬ ಪ್ರಶ್ನೆಯೂ, "ಹೌದು" ಎಂಬ ಉತ್ತರವೂ ಕೇಳಿಬಂದುವು. ಅದನ್ನು ಕೇಳುತ್ತಲೇ ಶಿವರಾಮಯ್ಯನವರು "ಇದೇನು ನಮ್ಮ ಶಾಮಣ್ಣನ ಧ್ವನಿಯಂತಿದೆ" ಎಂದು ಹೇಳುತ್ತಾ, ಬೀದಿಯ ಬಾಗಿಲಿಗೆ ಬಂದರು.

ಜಟಕಾದವನು ಸಾಮಾನುಗಳನ್ನು ತಂದು ಒಳಗಿಡುತ್ತಿದ್ದನು. ಹೊರಬಾಗಿಲಿನಲ್ಲಿ ಶಾಮಣ್ಣನೂ ಲಕ್ಷ್ಮೀದೇವಮ್ಮನವರೂ ನಿಂತಿದ್ದರು. ಆ ಬೆಳದಿಂಗಳ ಬೆಳಕಿನಲ್ಲಿ ಒಬ್ಬರ ಗುರುತು ಒಬ್ಬರಿಗೆ ಹತ್ತದೆ ಎಲ್ಲರಿಗೂ ಸ್ವಲ್ಪ ಪೆಚ್ಚಾಗಿತ್ತು. ಶಿವರಾಮಯ್ಯನವರು ಹೊರಕ್ಕೆ ಬಂದವರೇ "ಏನು ಶಾಮಣ್ಣ ಈಗ ರೈಲಿನಲ್ಲಿ ಬಂದೆಯಾ? ಬರುತ್ತೇನೆಂದು ಕಾಗದ ಏಕೆ ಬರೆಯಲಿಲ್ಲವಯ್ಯಾ?" ಎಂದರು.

ಶಾಮಣ್ಣನು ನಗುತ್ತಾ "ಸ್ವಲ್ಪ ಇರು ಮಹಾರಾಯ! ಎಲ್ಲಾ ಹೇಳುತ್ತೇನೆ. ಜಟಕಾದಲ್ಲಿ ಸಾಮಾನು ಇನ್ನು ಏನಾದರೂ ಇದೆಯೇ ನೋಡುತ್ತೇನೆ" ಎಂದು ಹೇಳಿ ಜಟಕಾದ ಸಮೀಪಕ್ಕೆ ಹೋದನು.

ಶಿವರಾಮಯ್ಯನವರು ನಂಜಪ್ಪನವರಕಡೆಗೆ ತಿರುಗಿ "ಚಿಕ್ಕಪ್ಪಾ ಇವರ ಗುರ್ತ ಸಿಕ್ಕಲಿಲ್ಲವೇ? ಅವನು ನನ್ನ ಮೈದುನ ಶಾಮಣ್ಣ. ತಂಗಿ ಯನ್ನು ಕರೆದುಕೊಂಡು ಬಂದಿದ್ದಾನೆ" ಎಂದರು.

"ಏನು ಲಕ್ಷ್ಮಿಯೇ? ಯಾಕೇ ಹುಡುಗೀ ಇಷ್ಟು ನಾಚಿಕೆ? ನಾನಂತೂ ಮುದುಕ. ಕಣ್ಣು ಸರಿಯಾಗಿ ಕಾಣಿಸುವುದಿಲ್ಲ. ನೀನು ಮಾತನಾಡಿಸಬಾರದೇನಮ್ಮ. ಸರಸೂ, ನಿನ್ನ ಅಕ್ಕ ಬಂದಿದಾಳೆ ಬಾ".

ಅಷ್ಟುಹೊತ್ತಿಗೆ ಶಾಮಣ್ಣನೂ ಜಟಕಾದವನೂ ಗಾಡಿಯಿಂದ ಹಿಂದಿರುಗಿ ಬಂದರು.

"ಸಾಮಾನೆಲ್ಲ ಸರಿಯಾಗೈತಾ ಸಾಮಿ? ಇನ್ನೊಂದು ಸಲ ನೋಡ್ಬಿಡಿ".

"ಎಲ್ಲಾ ಸರಿ. ಇಗೋನಿನ್ನ ಬಾಡಿಗೆ".

"ಎಷ್ಟಯ್ಯಾ ಕೊಡುತ್ತೀ" ಎಂದು ನಂಜಪ್ಪನವರು ಕೇಳಿದರು.

"ಒಂದು ರೂಪಾಯಿ".

"ಎಲ್ಲಾದರೂ ಉಂಟೇ! ನಮ್ಮ ಮನೆಗೆ ಮಾಮೂಲು ಎಂಟಾಣೆ. ಒಂದಕ್ಕೆರಡರಷ್ಟು ಕೊಡಬೇಕೆನ್ನುತೀಯಲ್ಲಯ್ಯ, ನಿನಗೆ ತಿಳೀದು ಎಂಟಾಣೆ ಮಾತ್ರ ಕೊಡು".

"ಬಿಡೀ ಸಾಮಿ, ಈ ರಾತ್ರಿಹೊತ್ನಾಗ ನಿಮ್ಮ ಮನೆ ಪತ್ತೇಮಾಡಿ ಕೊಟ್ಟಿದ್ದಕ್ಕೇ ಕೊಡಬೇಕು ರೂಪಾಯಿ. ಹಗಲಾಗಿದ್ದು ಮನೆ ಗೊತ್ತಿದ್ದಿದ್ದರೆ ನೀವೇಳಿದ ಲೆಕ್ಕಾ ಸರಿ. ನ್ಯಾಯವಾಗಿ ಇನ್ನೂ ನಾಲ್ಕಾಣೆ ಕೇಳಬೇಕಿತ್ತು ನಾನು".

"ಅದು ತಾನೆ ಏಕಯ್ಯ ಬಿಟ್ಟೆ. ಒಳ್ಳೆಯ ಮನುಷ್ಯ ನೀನು. ಹೋಗಲಿ. ಗೊತ್ತಿಲ್ಲದೋರು. ಅಷ್ಟೊಂದು ಕೇಳಬಾರದು. ಹನ್ನೆರಡಾಣೆ ತಗೋ".

"ಬಿಡಿ ಬಿಡಿ ಸಾಮಿ. ರೂಪಾಯಿಗೆ ಒಂದು ಕಾಸು ಕಡಮೇ ಕೊಟ್ಟರೂ ಮುಟ್ಕೋಕಿಲ್ಲ ನಾನು. ಈ ಪಂಚಾಯ್ತಿ ಗಿಂಚಾಯ್ತಿ ನಂಗೆ ಬೇಕಿಲ್ಲ. ಕೊಡ್ತೀರೋ ಇಲ್ಲೋ ನನ್ನ ದುಡ್ಡು"?

"ನೀನಿವತ್ತು ನರೀ ಮುಖ ನೋಡಿದ್ದೆ. ಹೋಗಲಿ ಕೊಡು ಶಾಮು. ಇನ್ನೊಂದು ದಿವಸ ಇವನನ್ನೇ ಕರೆದು ಆರೇ ಆಣೆ ಕೊಟ್ಟು ಇವತ್ತು ಹೆಚ್ಚಿಗೆ ತಗೊಂಡದ್ದಕ್ಕೆ ಸರಿಮಾಡ್ತೀನಿ".

"ಸರಿ ಬಿಡೀ ಸಾಮಿ, ನಿಮ್ಮಂತೋರೆಲ್ಲ ಹಿಂಗಂದ್ರೆ ನಾವ್ಹೆಂಗೆ ಹೊಟ್ಟೇ ಹೊರೀಬೇಕು. ಸಲಾಂ ಸಾಮಿ" ಎಂದು ಹೇಳುತ್ತಾ ಶಾಮು ಕೊಟ್ಟ ರೂಪಾಯನ್ನು ಜಟಕಾಗಾಡಿಯ ಲಾಂದರದ ಬೆಳಕಿನಲ್ಲಿ ತಿರುಗಿಸಿ ನೋಡಿಕೊಂಡು ಜೇಬಿನಲ್ಲಿ ಹಾಕಿಕೊಂಡು ಹೊರಟನು.

ಆಮೇಲೆ ಶಾಮಣ್ಣನು "ಅಲ್ಲ ಮಾವಯ್ಯಾ, ನಾನು ಮಾತಾಡಿದ್ದ ಒಂದು ರೂಪಾಯಿ ಕೊಡಬೇಡ ಎಂದಿರಲ್ಲ. ಅವನು ಬಿಟ್ಟು ಬಿಡುತ್ತಾ ನೆಯೇ"? ಎಂದು ನಕ್ಕನು.

"ಹಾಗಲ್ಲವಯ್ಯ, ನೀನು ಸದ್ದಿಲ್ಲದೆ ಒಂದು ರೂಪಾಯಿ ಕೊಟ್ಟಿದ್ದರೆ ಅವನೇನು ಮಾಡುತ್ತಿದ್ದ ಗೊತ್ತಿದೆಯೇ? ರಾತ್ರಿ ಹೊತ್ತು, ಅಲ್ಲಿ ಸುತ್ತಿದೆ, ಇಲ್ಲಿ ಸುತ್ತಿದೆ, ಎಂದು ರಂಪಾ ತೆಗೆದು ಇನ್ನೂ ನಾಲ್ಕಾಣೆನಾಗರೂ ಹೆಚ್ಚಿಗೆ ಕೇಳುತ್ತಿದ್ದ. ನಾನು ಯಾವಾಗ ಒಂದು ರೂಪಾಯಿಗೆ ತಕರಾರು ತೆಗೆದನೋ ಆಗ ಅವನು ತೆಪ್ಪಗಾದ. ಈ ಜಟಕಾದವರ ವಿಚಾರ ನಿನಗೆ ಗೊತ್ತಿಲ್ಲ. ನಡೀರಿ ಒಳಕ್ಕೆ ಹೋಗೋಣ".

ಎಲ್ಲರೂ ಒಳಗೆಬಂದು ಕುಳಿತುಕೊಳ್ಳುತ್ತಲೇ ಶಿವರಾಮಯ್ಯನವರು "ಇದೇನು ಶಾಮು ಹೀಗೆ ಏಕಾಏಕಿ ಕರೆದುಕೊಂಡು ಬಂದೆ"? ಎಂದು ಪ್ರಶ್ನಿಸಿದರು.

"ನಿನ್ನ ಹೆಂಡತಿಯ ಕಾಟ ತಡೆಯುವುದಕ್ಕೆ ಆಗದೆ ಬರಬೇಕಾಯಿ ತಪ್ಪ. ಮಾವಯ್ಯನ ಕಾಗದ ಬಂದದ್ದೇ ತಡ ಷುರುವಾಯಿತು ನನಗೆ

ಕುತ್ಸಿತಮುಳ್ಳ. ಇಗೋ ಪುಣ್ಯಾತಗಿತ್ತಿ, ನಿನ್ನ ಯಜಮಾನರು ಆರೋಗ್ಯ ವಂತರಾಗಿ ಧೃಢಕಾಯರಾಗಿ ಸುಖವಾಗಿದ್ದಾರೆ. ಇನ್ನಾದರೂ ಕಣ್ಣಿಗೆ ನಿದ್ರೆ ಬತ್ತುತ್ತದೆಯೆ ? ನಿನಗೆ ನಿದ್ರೆ ಬರದಿದ್ದರೂ ಪರವಾಗಿಲ್ಲ. ನನ್ನ ನಿದ್ರೆಗೆ ಇನ್ನುಮೇಲೆ ಅಡ್ಡಿಮಾಡಬೇಡ ಮಹಾರಾಯ್ತಿ ".

" ಬಿಡಕ್ಕಾ ನಿನ್ನ ಹಾಸ್ಯ. ಮಾವಯ್ಯನವರ ಕಾಗದ ಬರುತ್ತಲೂ ಅತ್ತೆಮ್ಮನವರು, ರಾಮು, ಸರಸು ಎಲ್ಲರನ್ನೂ ನಾನು ನೋಡಬೇಕೆಂಬ ಕುತೂಹಲದಿಂದ ಹೋಗೋಣವೆಂದೆ ".

" ನಿನ್ನನ್ನು ನೋಡಬೇಕೆಂದು ನಮಗೂ ಆಸೆಯಿತ್ತು. ಬರುವಂತೆ ಕಾಗದ ಬರಿ ಎಂದು ಎಷ್ಟು ಹೇಳಿದರೂ ನಿನ್ನ ಗಂಡ ಬರೆಯಲಿಲ್ಲ. ಆದು ದರಿಂದ ಅವನಿಗೆ ತಿಳಿಯದಂತೆ ನಾನು ನಿಮಗೆ ಬರೆದೆ. ನೀವು ಬಂದದ್ದು ನಮಗೆ ಬಹಳ ಸಂತೋಷವಾಯಿತು. ಶಿವೂ ! ನೀನು ಇಲ್ಲಿಗೆ ಬರುತ್ತಾ ಸರಸ್ವತಿಯನ್ನೊಬ್ಬಳನ್ನು ಕರೆದುಕೊಂಡುಬಂದು ಲಕ್ಷ್ಮಿಯನ್ನು ಊರಿನಲ್ಲೇ ಬಿಟ್ಟು ಬಂದಿದ್ದೆ. ಈಗ ವಿಜಯಲಕ್ಷ್ಮಿ ನಿನ್ನನ್ನು ಹುಡುಕಿಕೊಂಡು ಬಂದಿ ದ್ದಾಳೆ. ಇನ್ನು ನಿನ್ನ ಕೆಲಸವೆಲ್ಲದರಲ್ಲೂ ಜಯ ".

ಗುಂಪು ಎರಡಾಯಿತು. ಲಕ್ಷ್ಮೀದೇವಮ್ಮನವರಿಗೆ ಗೌರಮ್ಮನವ ರಿಂದಲೂ ಅವರು ಬಿಟ್ಟ ಅಲ್ಪ ಸ್ವಲ್ಪ ವಿಷಯಗಳು ಸರಸ್ವತಮ್ಮನಿಂದಲೂ ತಿಳಿದವು. ಶಾಮಣ್ಣನವರು ನಂಜಪ್ಪನವರ ಮನವೊಲಿಸಿಕೊಂಡ ನೆಂಟ ರಾಗಿ ಅವರೊಡನೆ ಮಾತನಾಡುತ್ತಾ ನಿದ್ರೆ ಹೋದರು.

## ೨೧

ಇಂದು ಅರಮನೆಯಲ್ಲಿ ವಿದ್ವತ್ಸಭೆ. ಸಭೆಯಲ್ಲಿ ನಡೆಯುವ ಕೆಲಸ ವೇನೆಂಬುದನ್ನು ಎಲ್ಲರೂ ನಿರ್ಧರಿಸಿ ಬಿಟ್ಟಿದ್ದರು. ಸಭೆಯ ಉದ್ದೇಶ ಸೋಮಶರ್ಮರಿಗೆ ಹೊಸ ಪ್ರಶಸ್ತಿ ಮತ್ತು ಬಹುಮಾನಗಳನ್ನು ಕೊಡುವು ದೆಂದು ಎಲ್ಲರೂ ಹೇಳುತ್ತಿದ್ದರು. ಇದು ಕೆಲವರಿಗೆ ಸಮಾಧಾನ

ಕೆಲವರಿಗೆ ಅಸಮಾಧಾನ. ಅನೇಕರಿಗೆ ನಮಗೆ ಬರದೇ ಹೋದಮೇಲೆ ಯಾರಿಗೆ ಬಂದರೆ ಏನೆಂಬ ತಾತ್ಸಾರ. ಆದರೆ ಎಲ್ಲರಿಗೂ ಸಭೆಗೆ ಹೋಗಿ ಅದನ್ನು ನೋಡಬೇಕೆಂಬ ಕುತೂಹಲ. ಪೆಟ್ಟಿಗೆಗಳಲ್ಲಿ ಮಡಿಸಿಟ್ಟಿದ್ದ ಬಣ್ಣ ಬಣ್ಣದ ಕಲಾಪತ್ತಿನ ಶಾಲುಗಳು ಮೇಲುಕೋಟೆಯ ಅಂಚಿನ ಪಂಚೆಗಳೂ ಹೊರಗೆ ಬಂದವು. ನಿಯತ ಕಾಲಕ್ಕೆ ಎಲ್ಲರೂ ಸಭಾಂಗಣವನ್ನು ಪ್ರವೇಶಿಸಿ ಅವರವರಿಗೆ ಗೊತ್ತಾದ ಆಸನಗಳಲ್ಲಿ ಕುಳಿತು ಕೊಂಡರು.

ಹೆಚ್ಚಿನ ಸಡಗರವೆಂದರೆ ನಂಜಪ್ಪನವರ ಮನೆಯಲ್ಲಿ. ಶಿವರಾಮಯ್ಯನವರಿಗೂ ವಿದ್ವತ್ಸಭೆಗೆ ಆಹ್ವಾನ ಬಂದಿತ್ತು. ಅವರಿಗೆ ಬೇಕಾದ ಬಟ್ಟೆಗಳನ್ನು ಹೊಂದಿಸಲು ಹಿಂದಿಗಿಂತಲೂ ಹೆಚ್ಚಾಗಿ ನಂಜಪ್ಪನವರು ಶ್ರಮಿಸಬೇಕಾಯಿತು. ಅವರ ಮನೆಯ ಹಿಂದಿನ ಬೀದಿಯಲ್ಲಿ ವಾಸಮಾಡುತ್ತಿದ್ದ ರಾಮಾಶಾಸ್ತ್ರಿಗಳೆಂಬ ಆಸ್ಥಾನ ವಿದ್ವಾಂಸರಿಗೂ ಶಿವರಾಮಯ್ಯನವರಿಗೂ ಪರಿಚಯ ಮಾಡಿಸಿ ಆಸ್ಥಾನಕ್ಕೆ ಹೋಗುವಾಗ ಶಿವರಾಮಯ್ಯನವರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ಅಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ತೋರಿಸಿಕೊಡಬೇಕೆಂದು ಅವರನ್ನು ಪ್ರಾರ್ಥಿಸಿ, ಹಾಗೆ ಮಾಡಲು ಅವರನ್ನು ಒಪ್ಪಿಸಿದರು. ಹೊತ್ತಿಗೆ ಸರಿಯಾಗಿ ಶಾಸ್ತ್ರಿಗಳು ಬಂದು ಶಿವರಾಮಯ್ಯನವರನ್ನು ಕರೆದುಕೊಂಡು ಹೊರಟರು. ನಂಜಪ್ಪನವರೂ ಗೌರಮ್ಮನವರೂ ಬಾಗಿಲಲ್ಲಿ ನಿಂತುಕೊಂಡು ಅವರಿಬ್ಬರೂ ಕಣ್ಮರೆಯಾಗುವವರೆಗೂ ನೋಡುತ್ತಿದ್ದು ರಾಮಾಶಾಸ್ತ್ರಿಗಳಿಗಿಂತಲೂ ಶಿವರಾಮಯ್ಯನವರಿಗೆ ಶಾಲು ರುಮಾಲುಗಳು ಚನ್ನಾಗಿ ಒಪ್ಪುವುದೆಂದೂ, ಶಿವರಾಮಯ್ಯನವರ ನಡಿಗೆಯ ಠೀವಿಯೇ ಠೀವಿಯೆಂದು ನಿಷ್ಕರ್ಷಿಸಿದರು. ಇವರಿಬ್ಬರ ಹಿಂದೆ ನಿಂತು ಇದೇಕೆಲಸದಲ್ಲಿ ನಿರತರಾಗಿದ್ದ ಸರಸ್ವತಮ್ಮನವರೂ ಲಕ್ಷ್ಮೀದೇವಮ್ಮನವರೂ ಸ್ವಲ್ಪ ಹೆಚ್ಚು ಕಡಿಮೆ ಅದೇ ತರಹ ತೀರ್ಪುಮಾಡಿದುದು ಹಿರಿಯರಿಗೆ ಕೇಳಿಬರಲಿಲ್ಲ.

ಸಭೆಗೆ ದಯಮಾಡಿಸಿದ ವಿದ್ವಾಂಸರುಗಳೆಲ್ಲರನ್ನು ಅವರ್ರಿಗೆ ನಿಯಮಿತವಾದ ಪೀಠಗಳಿಗೆ ಬೆಳ್ಳಿಯ ಕಟ್ಟಿಗೆಯವನು ಕರೆದುಕೊಂಡುಹೋಗಿ ಕುಳ್ಳಿರಿಸುತ್ತಿದ್ದನು. ರಾಮಾಶಾಸ್ತ್ರಿಗಳೂ ಶಿವರಾಮಯ್ಯನವರೂ ಪ್ರವೇಶಿ

ಸುತ್ತಲೇ ಅವರವರ ಪೀಠಗಳಿಗೆ ಅವರು ಹೋಗಬೇಕಾಗಿ ಶಾಸ್ತ್ರಿಗಳು ಹಿಂದಿನ ಸಾಲಿನ ಒಂದು ಪೀಠದಲ್ಲೂ ಶಿವರಾಮಯ್ಯನವರು ಬಲಭಾಗದಲ್ಲಿ ಮುಂದಿನ ಸಾಲಿನಲ್ಲಿ ಮೂರನೆಯ ಪೀಠದಲ್ಲಿಯೂ ಕುಳಿತುಕೊಳ್ಳಬೇಕಾಯಿತು. ಇಂತಹ ದೊಡ್ಡ ಸಭೆಗೆ ಬಂದುದು ಇದೇ ಮೊದಲು. ಅದರಲ್ಲೂ ರಾಜಸಭೆ. ಅಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ವಿಚಾರ ಸರಿಯಾಗಿ ತಿಳಿಯದು. ದಾರಿಯುದ್ದಕ್ಕೂ ಶಾಸ್ತ್ರಿಗಳಿಂದ ಸಾಧ್ಯವಾದಮಟ್ಟಿಗೂ ಪ್ರಶ್ನೆ ಮಾಡಿ ತಿಳಿದುಕೊಂಡದ್ದಾಗಿದ್ದಿತು. ಆದರೆ ಮಂತ್ರ–ತಂತ್ರಗಳು ಹೊಂದಿಕೊಂಡು ಹೋಗದೆ ಎಲ್ಲಿ ಅಭಾಸವಾಗುವುದೋ ಎಂದು ಮನಸ್ಸಿಗೆ ದಿಗಿಲು, ಹೀಗೆ ಶಿವರಾಮಯ್ಯನವರು ಯೋಚಿಸುತ್ತಿದ್ದಾಗ ಅರಮನೆಯ ಅಧಿಕಾರಿಗಳಂತೆ ತೋರುತ್ತಿದ್ದವರೊಬ್ಬರು ಇವರ ಹತ್ತಿರ ಬಂದು "ನಾನು ತಮಗೆ ಅಪರಿಚಿತ. ಸಮ್ಮುಖದಲ್ಲಿ ನನಗೆ ಒಂದು ನೌಕರಿಯಿದೆ. ಮಹಾಸ್ವಾಮಿಗಳು ಈ ದಿನದ ಸಭೆಯಲ್ಲಿ ನಾನು ತಮ್ಮ ಪಕ್ಕದಲ್ಲಿ ಕುಳಿತುಕೊಳ್ಳಲು ಅವಕಾಶ ದಯಪಾಲಿಸಿದ್ದಾರೆ. ತಮ್ಮಂತಹ ವಿದ್ವನ್ಮಣಿಗಳ ಗೋಷ್ಠಿಯಲ್ಲಿ ಸೇರಲು ನನಗೆ ಯೋಗ್ಯತೆಯಿಲ್ಲ" ಎಂದು ಹೇಳುತ್ತಾ ಪಕ್ಕದ ಪೀಠದಲ್ಲಿ ಕುಳಿತು—ಅಲ್ಲಿಗೆ ಬಂದು ಕುಳಿತಿರುವ; ಬರುತ್ತಿರುವ ವಿದ್ವಾಂಸರ ವಿಚಾರ —ಸಭೆಯಲ್ಲಿನ ನಡವಳಿಕೆ ಎಲ್ಲ ಪಿಸುಮಾತಿನಲ್ಲಿ ತಿಳಿಸಲಾರಂಭಿಸಿದರು.

"ಮಹಾಸ್ವಾಮಿ ಪರಾಕ್" ಎಂಬ ಗಂಭೀರವಾದ ಶಬ್ದ ಕೇಳಿಬರುತ್ತಲೇ ಎಲ್ಲರೂ ಎದ್ದುನಿಂತರು. ವಿಧ್ವನ್ಮಂಡಲಿಯ ಪರವಾಗಿ ಕೃಷ್ಣಭಟ್ಟರಿಂದ ಆಶೀರ್ವಚನವಾದ ಮೇಲೆ ಮಹಾರಾಜರು ಬೆಳ್ಳಿಯ ಪೀಠವನ್ನು ಅಲಂಕರಿಸಿದರು. ಹಿಂಭಾಗದಲ್ಲಿ ಎರಡು ಕಡೆಯಲ್ಲಿಯೂ ಅಂಗರಕ್ಷಕರು ಒರೆಯಿಂದ ಹಿರಿದ ಥಳಥಳಿಸುವ ಕತ್ತಿಯನ್ನು ಕೈಯಲ್ಲಿ ಹಿಡಿದು ನಿಂತರು. ಸಭಾಮಂಟಪದಲ್ಲಿ ಸೂಜಿ ಕೆಳಗೆಬಿದ್ದರೂ ಶಬ್ದವು ಕೇಳಿಬರುವಷ್ಟು ನಿಶ್ಶಬ್ದತೆ ಇದ್ದಿತು. ಆಗ ಮಹಾರಾಜರು ಗಂಭೀರವಾದ ವಾಣಿಯಲ್ಲಿ "ಸಭಿಕರೇ! ಕೆಲವುದಿನಗಳ ಹಿಂದೆ ನಾವು ಒಂದು ಗ್ರಂಥಸ್ಪರ್ಧೆಯನ್ನೇರ್ಪಡಿಸಿದ್ದೆವು. ಗ್ರಂಥಗಳನ್ನು ಕಳುಹಿಸಬೇಕೆಂದು ಕೆಲವು ವಿದ್ವಾಂಸರಿಗೆ ಆಹ್ವಾನ ಕಳುಹಿಸಿದ್ದೆವು. ಅದರಂತೆ ಬಂದ ಗ್ರಂಥಗಳಲ್ಲಿ ಇದು ಉತ್ತಮ, ಇದು ಕೀಳು

ಎಂದು ಹೇಳುವಹಾಗೆಯೇ ಇರಲಿಲ್ಲ. ಎಲ್ಲವೂ ಬಹಳ ಉತ್ತಮ ದರ್ಜೆಯ ದಾಗಿದ್ದುವು. ಸ್ಪರ್ಧೆ ಎಂದಮೇಲೆ ಒಂದು ಗ್ರಂಥ ಅತ್ಯುತ್ತಮವೆಂದು ಆರಿಸಲೇಬೇಕಾಗಿ ಬಂತು. ನಮ್ಮ ಸಭೆಯ ಅಮೂಲ್ಯ ರತ್ನಗಳಲ್ಲೊಬ್ಬ ರಾದ ಕೃಷ್ಣಭಟ್ಟರ ಕೃತಿ ಆ ಸ್ಥಾನಕ್ಕೆ ಅರ್ಹವೆಂಬುದು ನಮ್ಮ ಮನಸ್ಸಿಗೆ ತೋರಿ ಅದರಂತೆ ನಿಷ್ಕರ್ಷಿಸಿ ಕೃಷ್ಣಭಟ್ಟರಿಗೆ 'ಕನ್ನಡ ಕವಿರತ್ನ' ಎಂಬ ಬಿರುದನ್ನೂ ಚಿನ್ನದ ಪದಕವನ್ನೂ ನಮ್ಮ ಮೆಚ್ಚಿಗೆಯ ಕುರುಹಾಗಿ ಕೊಡಲು ಸಂತೋಷವಾಗುತ್ತದೆ" ಎಂದರು.

ಎಲ್ಲರ ಮುಖದಲ್ಲಿಯೂ ಆಶ್ಚರ್ಯವು ಎದ್ದು ಕಾಣುತ್ತಿತ್ತು. ಎಲ್ಲ ಕಣ್ಣುಗಳೂ ಸೋಮಶರ್ಮರು ಕುಳಿತುಕೊಳ್ಳಬೇಕಾಗಿದ್ದ ಸ್ಥಳಕ್ಕೆ ಹೊರಳಿ ದವು. ಪೀಠವು ಬರಿದಾಗಿದ್ದಿತು. ಬರಿದಾಗಿರಲು ಈ ಫಲಿತಾಂಶವು ಕಾರಣ ವಾಗಿರಬಹುದೇ ಎಂದು ಎಲ್ಲರೂ ಶಂಕಿಸಲು ಪ್ರಾರಂಭಿಸಿದರು. ಎಲ್ಲರಿ ಗಿಂತಲೂ ಕೃಷ್ಣಭಟ್ಟರಿಗೆ ಹೆಚ್ಚಿನ ಆಶ್ಚರ್ಯ. ಇದೇನು ಕನಸೋ! ಎಂದು ಅವರಿಗೆ ಭ್ರಾಂತಿ. ಎದ್ದು ನಿಂತರು. ಮಹಾರಾಜರ ಬಲಭಾಗದಲ್ಲಿ ಸ್ವಲ್ಪ ದೂರದಲ್ಲಿ ನಿಂತಿದ್ದ ದರ್ಬಾರು ಭಕ್ಷಿಯವರು ಬೆಳ್ಳಿಯ ತಟ್ಟೆಯಲ್ಲಿ ಒಂದು ಜೊತೆ ಕಲಾಪತ್ತಿನ ಶಾಲು, ಚಿನ್ನದ ಸರಪಣಿಯಿಂದ ಕೂಡಿದ ಪದಕ ಬಿರುದುಪತ್ರಗಳನ್ನು ತಂದು ಶಾಲನ್ನು ಹೊದಿಸಿ, ಪದಕವನ್ನು ಕೊರಳಿಗೆ ಹಾಕಿ, ಪತ್ರದ ಸುರುಳಿಯನ್ನು ಕೈಗೆ ಕೊಟ್ಟರು. 'ಕನ್ನಡ ಕವಿರತ್ನ' ಕೃಷ್ಣ ಭಟ್ಟರು ಮಹಾಸ್ವಾಮಿಗಳಿಗೂ ಸಭಿಕರಿಗೂ ವಂದಿಸಿ ಪೀಠದಮೇಲೆ ಕುಳಿತರು.

ಮಹಾಸ್ವಾಮಿಗಳು "ಈ ಸ್ಪರ್ಧೆಯಿಂದ ಕನ್ನಡದಲ್ಲಿ ಕೆಲವು ಗ್ರಂಥ ಗಳು ಹೆಚ್ಚಿಗುದಲ್ಲದೆ ನಮ್ಮ ವಿದ್ವನ್ಮೌಕ್ತಿಕ ಹಾರಕ್ಕೆ ಇನ್ನೊಂದು 'ಜಾತಿ ಮುತ್ತು' ಸಿಕ್ಕಿತು. ಅದನ್ನು ನಮಗೆ ದೊರಕಿಸಿಕೊಟ್ಟವರು ಇಬ್ಬರು. ದುರದೃಷ್ಟದಿಂದ ಇಬ್ಬರಿಗೂ ಈ ದಿನದ ಸಭೆಗೆ ಬರಲು ಸಾಧ್ಯವಾಗಲಿಲ್ಲ. ಒಬ್ಬರು ನಮ್ಮ ಸೋಮಶರ್ಮರು, ಇನ್ನೊಬ್ಬರು ಅಮೆರಿಕಾದ್ದಿಂದ ಬಂದು ಇಲ್ಲಿ ನೆಲೆಸಿರುವ ಕ್ರೈಸ್ತಮತ ಪ್ರಸಾರಕರಾದ ಹೆಂಡ್ರಿಕ್ಸ್ ಟಾನಸ್ಲೇಯವರು.

ಅವರು ದೊರಕಿಸಿಕೊಟ್ಟ ವಿದ್ವಾಂಸರು ಈಗ ಈ ಸಭೆಯಲ್ಲಿರುವುದು ಬಹಳ ಸಂತೋಷ ಸಮಾಚಾರ ".

ಮಹಾರಾಜರು ಹೀಗೆ ಹೇಳುತ್ತಿದ್ದಾಗ ಪಕ್ಕದಲ್ಲಿ ಕುಳಿತಿದ್ದ ಅಧಿಕಾರಿಗಳು ಶಿವರಾಮಯ್ಯನವರಿಗೆ ಸನ್ನೆಮಾಡಲು—ತಾವು ಏನುಮಾಡುತ್ತಿದ್ದೇವೆಂಬುದರ ಅರಿವೇ ಇಲ್ಲದೆ—ಶಿವರಾಮಯ್ಯನವರು ಪೀಠವನ್ನು ಬಿಟ್ಟೆದ್ದು ಮಹಾರಾಜರನ್ನೂ ಸಭಿಕರನ್ನೂ ವಂದಿಸಿದರು.

" ವಿದ್ವಾನ್ ಶಿವರಾಮಯ್ಯನವರಿಂದ ಕನ್ನಡದಲ್ಲಿ ಬರೆಯಲ್ಪಟ್ಟಿರುವ ಪುಸ್ತಕವು ನಮಗೆ ಸೋಮಶರ್ಮರಿಂದ ಬಂದಿತು. ಆ ಪುಸ್ತಕವನ್ನು ಟಾನಸ್ಲೇಯವರು ತಮ್ಮ ಮುದ್ರಣಾಲಯದಲ್ಲಿ ಮುದ್ರಿಸಬೇಕೆಂದಿದ್ದರು. ಅದು ನಮಗೆ ತಿಳಿಯದೆ, ನಮ್ಮ ಸ್ವಂತ ಮುದ್ರಣಾಲಯದಲ್ಲಿ ಮುದ್ರಣ ಮಾಡಿಸಿದ್ದೇವೆ. ಭಕ್ಷಿಯವರಿಂದ ತಮಗೆ ಕೊಡಲಾಗುವ ಅದನ್ನು ತಾವು ಅವಲೋಕಿಸಿದರೆ ನಮಗೆ ದೊರೆತಿರುವುದು ಒಂದು ಅಮೂಲ್ಯ ರತ್ನವೆಂಬ ನಮ್ಮ ಅಭಿಪ್ರಾಯವನ್ನು ತಾವೂ ಅನುಮೋದಿಸುವಿರಿ. ಇಂದಿನಿಂದ ಶಿವರಾಮಯ್ಯನವರು ನಮ್ಮ ಆಸ್ಥಾನದಲ್ಲೇ ಇರಬೇಕೆಂಬುದು ನಮ್ಮ ಸಂತೋಷ. ಇದುವರೆಗೂ ಅವರ ಸ್ಥಳದಲ್ಲಿ ಅವರು ಮಾಡುತ್ತಿದ್ದ ಉಪಯುಕ್ತ ಕಾರ್ಯವು ಸತತವಾಗಿ ನಡೆದುಬರುವಂತೆ ಭಕ್ಷಿಯವರು ಏರ್ಪಡಿಸುವರು ".

ಪುನಃ ಪಕ್ಕದಲ್ಲಿದ್ದ ಅಧಿಕಾರಿಗಳು ಎರಡು ಮೂರು ಸಲ ತಿವಿದರು. ಅಸಮ್ಮತಿಯನ್ನು ಹೇಗೆ ತೋರ್ಪಡಿಸಬೇಕೆಂಬ ಸಂಕೋಚದಿಂದಲೋ ಹಾಗೆ ತೋರಿಸಲು ಧೈರ್ಯವಿಲ್ಲದೆಯೋ ಶಿವರಾಮಯ್ಯನವರು ಎದ್ದುನಿಂತು ಮಹಾರಾಜರನ್ನು ವಂದಿಸಿ ತನ್ಮೂಲಕ ಒಪ್ಪಿಗೆಯನ್ನು ಸೂಚಿಸಿದರು.

" ನಮಗೆ ಉಪಕಾರಮಾಡಿದ ಟಾನಸ್ಲೇಯವರಿಗೆ ನಾವು ಅಪಕಾರ ಮಾಡಿದಂತಾಗಿದೆ. ಅದನ್ನು ಆದಷ್ಟುಮಟ್ಟಿಗೆ ಸರಿಪಡಿಸಲು 'ಕನ್ನಡ ಕವಿರತ್ನ' ಕೃಷ್ಣಭಟ್ಟರ ನೂತನ ಗ್ರಂಥವನ್ನು ಪ್ರಕಟಿಸುವ ಅವಕಾಶವನ್ನು ಅವರಿಗೆ ಕೊಡಬೇಕೆಂದು ನಮ್ಮ ಅಭಿಲಾಷೆ. ಹಾಗೆ ಮಾಡಲು ಭಟ್ಟರು ಸಮ್ಮತಿಸುವರೆಂದೂ ಗ್ರಂಥವು ಬೇಗ ಅಚ್ಚಾಗಿ ನಿಮ್ಮೆಲ್ಲರ ಕೈಸೇರುವು

ದೆಂದೂ ನಾವು ನಂಬಿದ್ದೇವೆ" ಎಂದು ಹೇಳಿ ಕೃಷ್ಣಭಟ್ಟರಕಡೆ ನೋಡಿದರು.

ಭಟ್ಟರು ಎದ್ದುನಿಂತು ಶಿರಬಾಗಿ ಸಮ್ಮತಿಯನ್ನು ಕೊಡಲು ಮಹಾ ರಾಜರು ಭಕ್ಷಿಯವರ ಕಡೆ ನೋಡಿ ಆಸನದಿಂದೆದ್ದರು.

ಭಕ್ಷಿಯವರಿಂದ ಯಥೋಚಿತ ಮರ್ಯಾದೆ ಹೊಂದಿ ಹೊರಟ ವಿದ್ವಾಂಸರುಗಳೆಲ್ಲರ ಬಾಯಲ್ಲೂ ಹೊಸ ವಿದ್ವಾಂಸರ ಮತ್ತು ಕೃಷ್ಣಭಟ್ಟರ ಮಾತೇ ಆಗಿತ್ತು. ಸೋಮಶರ್ಮರು ಅಂದಿನ ಸಭೆಗೆ ಬಾರದಿದ್ದುದಕ್ಕೆ ಒಬ್ಬೊಬ್ಬರು ಒಂದೊಂದು ತರಹ ಕಾರಣಗಳನ್ನು ಹೇಳಲಾರಂಭಿಸಿದರು. ಹೊಸ ವಿದ್ವಾಂಸರ ಪುಸ್ತಕ ಮಹಾರಾಜರಿಂದ ಪ್ರಶಂಸಿಸುವಷ್ಟು ಅರ್ಹತೆ ಯನ್ನು ಹೇಗೆ ಪಡೆಯಿತೆಂಬುದನ್ನು ಪರೀಕ್ಷಿಸಲು ಕೆಲವರಂತೂ ದಾರಿಯಲ್ಲೇ ಪುಸ್ತಕವನ್ನು ತೆಗೆದು ನೋಡಲಾರಂಭಿಸಿದರು. ಕೃಷ್ಣಭಟ್ಟರ ಸ್ನೇಹಿತರು ಅವರನ್ನು ಸುತ್ತುಗಟ್ಟಿ ತಮ್ಮ ಸಂತೋಷವನ್ನು ಸೂಚಿಸುತ್ತಾ ಸುವರ್ಣ ಪದಕವನ್ನೂ ಬಿರುದು ಪತ್ರವನ್ನೂ ಒಬ್ಬರಕೈಯಿಂದೊಬ್ಬರು ತೆಗೆದುಕೊಂಡು ನೋಡುತ್ತಾ ನಿಧಾನವಾಗಿ ಭಟ್ಟರಮನೆಯ ಕಡೆಗೆ ಹೊರಟರು. ಮನೆಯ ಸಮೀಪಕ್ಕೆ ಬರುವ ಹೊತ್ತಿಗೆ ಒಬ್ಬೊಬ್ಬರಾಗಿ ಕಳಚಿಕೊಂಡು ಶ್ರೀಕಂಠ ಯ್ಯನೊಬ್ಬನೇ ಗುರುಗಳ ಹಿಂದೆ ಉಳಿದನು. ಭಟ್ಟರು ಇದನ್ನು ಕಂಡು "ಬಾ ಕಂಠೀ, ಒಳಗೆ ಹೋಗೋಣ. ನೀನು ಬರುತ್ತಿದ್ದುದನ್ನು ಈಗಲೇ ನಾನು ನೋಡಿದುದು" ಎಂದರು.

ಮನೆಯೊಳಕ್ಕೆ ಪ್ರವೇಶಿಸುತ್ತಾ ಕಂಠಿಯು "ದೊಡ್ಡವರೆಲ್ಲರೂ ತಮ್ಮ ಸುತ್ತ ಇದ್ದರು. ಅವರ ನಡುವೆ ನುಗ್ಗಿಬರುವ ಸಾಹಸ ಮಾಡಲಾಗಲಿಲ್ಲ. ನಾನು—ಮಹಾಸ್ವಾಮಿಗಳು ಪಕ್ಷಪಾತಿಗಳೆಂದು ಭಾವಿಸಿ—ತಪ್ಪುಮಾಡಿದ್ದೆ. ಈದಿನ ನನ್ನ ತಪ್ಪು ನನಗೆ ತಿಳಿದುಬಂದಿತು. ಆ ತಪ್ಪು ಭಾವನೆಯಿಂದ ಶರ್ಮರ ಗ್ರಂಥ ಬಾರದಿರುವಂತೆ ಮಾಡಲು ಹೊರಟೆ ದೇವರ ದಯೆ ಯಿಂದ ನನ್ನ ಪ್ರಯತ್ನ ವಿಫಲವಾಯಿತು. ತಮ್ಮ ಗ್ರಂಥವನ್ನು ಮಹಾ ರಾಜರ ದೃಷ್ಟಿಗೆ ತರುತ್ತೇನೆಂದು ಸಾಹಸಮಾಡಿದ ನನ್ನನ್ನು ಕ್ಷಮಿಸಬೇ ಕಾಗಿ ಬೇಡುತ್ತೇನೆ".

"ಇದರಲ್ಲಿ ನಾನು ಕ್ಷಮಿಸುವಂತಹುದೇನೂ ಇಲ್ಲ ಕಂಠೀ! ನಿನ್ನ ಗುರುಗಳಿಗೆ ಉಪಕಾರ ಮಾಡಲು ನೀನು ಹೀಗೆ ಮಾಡಿದೆ. ಗುರುಗಳಿಗೆ ಯಥಾಶಕ್ತಿ ಸೇವೆ ಮಾಡಬಯಸುವುದು ಸಚ್ಛಿಷ್ಯನ ಲಕ್ಷಣ. ನಿನ್ನ ಪ್ರಯತ್ನದ ಫಲವಾಗಿಯೇ ನನಗೆ ಈ ದಿನ ಮರ್ಯಾದೆ ಸಿಕ್ಕಿರಬಹುದು. ಅಲ್ಲವೆಂದು ಹೇಗೆ ಹೇಳುತ್ತೀ? ನೀನು ನೊಂದುಕೊಳ್ಳಬೇಕಾದ್ದು ನನಗೆ ಸಹಾಯಮಾಡಲು ಪ್ರಯತ್ನಪಟ್ಟುದಕ್ಕಲ್ಲ. ನಾವು ಮಾಡುವ ಕೆಲಸ ಎಷ್ಟು ಉತ್ತಮವಾದುದಾದರೂ ಅದರಿಂದ ಇನ್ನೊಬ್ಬರಿಗೆ ಅನ್ಯಾಯವಾಗ ಬಾರದು. ಒಂದು ಕೆಲಸದಿಂದ ಸಾವಿರಾರು ಜನಗಳಿಗೆ ಅನುಕೂಲವಾದ ರೂ ಅದರಿಂದ ಕೇವಲ ಒಬ್ಬ ವ್ಯಕ್ತಿಗೆ ಅನ್ಯಾಯವಾದರೆಕೂಡ ಆ ಕೆಲಸ ಉತ್ಕೃಷ್ಟವಾದುದೆಂದು ಹೇಳಲಾಗುವುದಿಲ್ಲ. ಅಂತಹ ಕೆಲಸ ನೀತಿದೇವಿಗೆ ಅಪಚಾರ. ಈ ದೃಷ್ಟಿಯಿಂದ ನೀನು ಪಟ್ಟ ಪ್ರಯತ್ನಕ್ಕೆ ನೀನು ವ್ಯಥೆ ಪಡಬೇಕು. ಇದನ್ನು ಮನಸ್ಸಿಗೆ ತಂದುಕೊಂಡು ಮುಂದೆ ಈ ರೀತಿ ನೀತಿ ಪಥದಿಂದ ಜಾರದಂತೆ ಎಚ್ಚರಿಕೆಯಿಂದಿರು. ತಪ್ಪು ಮಾಡದಿರುವ ಮನು ಷ್ಯರು ಇಲ್ಲ. ಆದರೆ ಮಾಡಿದ ತಪ್ಪನ್ನು ಮನಗಂಡು ಪುನಃ ಅದನ್ನು ಮಾಡದಂತೆ ಜಾಗ್ರತೆಯಿಂದಿರುವವರು ಉತ್ತಮರು. ಪಾಠ ಕಲಿತದ್ದಾ ಯಿತು. ನಡೆದು ಹೋದುದನ್ನು ಯೋಚಿಸಿ ಫಲವಿಲ್ಲ ಬಾ ಒಳಗೆ ಹೋಗೋಣ. ಈ ದಿನದಲ್ಲಿ ಅನಿರೀಕ್ಷಿತ ಮನ್ನಣೆ ದೊರಕಿಸಿಕೊಟ್ಟ ದೇವಿಗೆ ಸಹಸ್ರನಾಮಾರ್ಚನೆ ಮಾಡಬೇಕೆಂದು ಮನಸ್ಸಾಗಿದೆ. ಪೂಜೆಯಾಗುವ ವರೆಗೂ ಇಲ್ಲಿಯೇ ಇದ್ದು, ಪ್ರಸಾದವನ್ನು ತೆಗೆದುಕೊಂಡು ಹೋಗುವಿ ಯಂತೆ" ಎಂದು ಹೇಳುತ್ತಾ ಶಿಷ್ಯನನ್ನು ಮನೆಯಲ್ಲಿ ನಿಲ್ಲಿಸಿಕೊಂಡರು.

ಶಿವರಾಮಯ್ಯನವರು ಮನೆಗೆ ಬಂದು ಸೇರುವ ಮೊದಲೇ ದರ್ಬಾ ರಿನಲ್ಲಿ ನಡೆದ ವಿಷಯ ಮನೆಯನ್ನು ಮುಟ್ಟಿದ್ದಿತು. ಎಲ್ಲರೂ ಉತ್ಸಾಹ ದಿಂದ ಅವರ ಬರವನ್ನೇ ಎದುರು ನೋಡುತ್ತಿದ್ದರು. ವಿಚಾರಗಳನ್ನೆಲ್ಲಾ ಪುನಃಪುನಃ ಕೇಳಿ ಅವರ ಬಾಯಿಂದ ಹೇಳಿಸಿದರು. ಮಹಾರಾಜರು ನಿಜಾಂಶವನ್ನು ಹೇಗೆ ತಿಳಿದುಕೊಂಡರೆಂಬುದನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಊಹಿಸಲಾರಂಭಿಸಿದರು. ಎಲ್ಲರ ಊಹೆಯೂ ಸರಿಯಾಗಿಯೇ

ಇದ್ದಿತು. ಆದರೆ ಮಹಾರಾಜರಿಂದ ಶರ್ಮರಿಗೆ ಪತ್ರ ಹೋದದ್ದು, ಅದಕ್ಕೆ ಉತ್ತರವಾಗಿ ಶರ್ಮರು ಎಲ್ಲ ವಿಷಯಗಳನ್ನೂ ಇದ್ದದ್ದು ಇದ್ದಂತೆ ತಿಳಿಸಿ ಬರೆದು ತಮ್ಮ ಈ ಅಪರಾಧವನ್ನು ಮನ್ನಿಸಬೇಕೆಂದೂ, ಆಸ್ಥಾನವನ್ನು ಬಿಟ್ಟು ಸ್ವಗ್ರಾಮಕ್ಕೆ ಹೋಗಿ ವಾಸಿಸಲು ಅನುಮತಿಯನ್ನೀಯಬೇಕೆಂದೂ ಪತ್ರಬಂದದ್ದು, ಪುನಃ ಮಹಾಸ್ವಾಮಿಗಳು ಗ್ರಂಥದ ಸಂಗಡ ಶರ್ಮರು ಬರೆದಿದ್ದ ಪತ್ರದಲ್ಲಿ ಗ್ರಂಥಕಾರರು ತಾವೆಂದು ಹೇಳಿಕೊಂಡಿರಲಿಲ್ಲವೆಂದೂ ಗ್ರಂಥವನ್ನು ಅವರ ಹೆಸರಿನಲ್ಲಿ ಪ್ರಕಟಿಸಲು ಹೊರಟದ್ದು ತಮ್ಮ ಅಚಾತುರ್ಯವೆಂದೂ ಎಲ್ಲ ವಿವರಗಳನ್ನೂ ಟಾನಸ್ಲೀಯವರಿಗೂ ಶಿವರಾಮಯ್ಯನವರಿಗೂ ತಿಳಿಸಿ ಪುಸ್ತಕದ ವಿಷಯ ಇನ್ನು ಮುಂದೆ ಯಾರೂ ಪ್ರಸ್ತಾಪಿಸದಂತೆ ತಾವು ನೋಡಿಕೊಳ್ಳುವುದಾಗಿ ಭರವಸೆಯಿತ್ತು, ಶರ್ಮರು ಆಸ್ಥಾನವನ್ನು ಬಿಟ್ಟು ಹೊರಡಲು ನಿಷೇಧಿಸಿ ಪತ್ರಬರೆದುದೂ ಯಾರಿಗೂ ಊಹಿಸಲು ಸಾಧ್ಯವಾಗಲಿಲ್ಲ. ಭೋಜನಾನಂತರ ನಂಜಪ್ಪನವರೂ ಶಿವರಾಮಯ್ಯನವರೂ ಆಸ್ಪತ್ರಿಗೆ ಹೋಗಿ ನಡೆದ ವಿಚಾರಗಳೆಲ್ಲವನ್ನೂ ಲಿಲ್ಲಿಯವರಿಗೂ ಸ್ವಲ್ಪಮಟ್ಟಿಗೆ ಗುಣಹೊಂದಿದ್ದ ಟಾನಸ್ಲೀಯವರಿಗೂ ತಿಳಿಸಿ, ಲಿಲ್ಲಿಯಮ್ಮನವರ ಸಹಾಯಕ್ಕೆ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿದರು. ದಂಪತಿಗಳು ಇದೆಲ್ಲಾ ದೇವರ ಮನಸ್ಸಿನಲ್ಲಿದ್ದಂತೆ ನಡೆಯಿತೆಂದೂ ದೇವರ ನಿಶ್ಚಯಕ್ಕೆ ವಿರುದ್ಧವಾಗಿ ಹೋಗಲು ಸಾಧ್ಯವಿಲ್ಲವೆಂದೂ ತಿಳಿಸಿ ಶಿವರಾಮಯ್ಯನವರ ಎರಡನೇ ಗ್ರಂಥವನ್ನಾದರೂ ಪ್ರಕಟಿಸುವ ಭಾಗ್ಯವನ್ನು ಮಹಾರಾಜರಿಂದ ಪಡೆಯುವುದಾಗಿ ನಗುತ್ತಾ ಹೇಳಿದರು.

## ೨೨

ನಂಜಪ್ಪನವರು ತಮ್ಮ ಮನೆಯ ಹತ್ತಿರವೇ ಶಿವರಾಮಯ್ಯನವರಿಗೂ ಮನೆಮಾಡಿ ಕೊಟ್ಟರು. ಲಕ್ಷ್ಮೀದೇವಮ್ಮನವರು ಹಿಂದೆಯೇ ಹೇಳಿದ್ದಂತೆ ಲಿಲ್ಲಿಯವರ ಸಹಾಯದಿಂದಲೂ ಏನೂ ಪ್ರಯೋಜನವಾಗಲಿಲ್ಲ. ಆದರೆ ಚಿಕ್ಕ ಶಿವೂ ಮಕ್ಕಳಿಲ್ಲವೆಂಬ ಕೊರಗನ್ನು ಬಹಳಮಟ್ಟಿಗೆ ಕಡಿಮೆಮಾಡಿದ. ಚಿಕ್ಕ ಶಿವೂ ಎಲ್ಲಿದ್ದಾನೆಂದು ನೋಡಬೇಕೆಂದರೆ ದೊಡ್ಡ ಶಿವೂ ಮನೆಯಲ್ಲಿ.

ಪುಟ್ಟ ಗೋಪಾಲನು ಹುಟ್ಟಿದ ಮೇಲಂತೂ ಶಿವೂಗೆ ಮನೆಯಲ್ಲಿ ಆದರ ಕಡಿಮೆಯಾದಂತಾಗಿ ದೊಡ್ಡಪ್ಪನ ಮನೆಯೇ ಹೆಚ್ಚು ಆಕರ್ಷಣೀಯವಾಯಿತು. ಶಿವರಾಮಯ್ಯನವರು ನಿರೀಕ್ಷಿಸಿದ್ದುದಕ್ಕಿಂತಲೂ ಹೆಚ್ಚು ಯಶಸ್ಸು ಸಂಪಾದಿಸಿ ಸೋಮಶರ್ಮ ಕೃಷ್ಣಭಟ್ಟರಿಗೆ ಯಾವುದರಲ್ಲೂ ಕಡಮೆ ಎಂದೆನಿಸಿಕೊಳ್ಳಲಿಲ್ಲ. ಇವರ ಗಂಭೀರವಾದ ನಿಷ್ಕಲ್ಮಷವಾದ ನಡವಳಿಕೆ ಸೋಮಶರ್ಮರು ಮೊದಲು ಕೆಲವು ದಿನಗಳು ಮನಸ್ಸಿನಲ್ಲಿಟ್ಟುಕೊಂಡಿದ್ದ ತಪ್ಪು ಅಭಿಪ್ರಾಯವನ್ನು ಮಾರ್ಪಡಿಸುವಂತೆ ಮಾಡಿತು. ಶಿವರಾಮಯ್ಯನವರ ಎರಡನೇ ಗ್ರಂಥವನ್ನು ಟಾನಸ್ಲೇಯವರೇ ಪ್ರಕಟಿಸಿದರು. ಯಾವ ಕನ್ನಡ ಗ್ರಂಥವನ್ನು ಪ್ರಕಟಿಸಬೇಕಾಗಿದ್ದರೂ ಮೊದಲು ಶಿವರಾಮಯ್ಯನವರ ಅಭಿಪ್ರಾಯವನ್ನು ಪಡೆಯುತ್ತಿದ್ದರು. ಈ ಎಲ್ಲ ಸನ್ನಿವೇಶಗಳ ಫಲವಾಗಿ ಲಕ್ಷ್ಮೀದೇವಮ್ಮನವರ ಒಡವೆ ಬಟ್ಟೆಗಳ ಮೇಲಿನ ಅಭಿಲಾಷೆ ಸಫಲವಾಯಿತು. ತಮ್ಮ ಪ್ರಥಮ ಗ್ರಂಥ ಪ್ರಕಟವಾದ ಸಂಗತಿಯನ್ನು ಜ್ಞಾಪಿಸಿಕೊಂಡಾಗ ಶಿವರಾಮಯ್ಯನವರಿಗೆ ಇಷ್ಟೆಲ್ಲಕ್ಕೂ ಕಾರಣ ಯಾರು? ಕೆಟ್ಟುಹೋದ ಮೋಟಾರೇ? ತಮ್ಮ ಹಳೆಯ ಲಾಂದರವೇ? ಲಕ್ಷ್ಮೀದೇವಮ್ಮನವರ ಒಗ್ಗರಣೆ ಅವಲಕ್ಕಿಯೇ? ಟಾನಸ್ಲೇಯವರೇ? ಶರ್ಮರೇ? ನಂಜಪ್ಪನವರೇ? ರಾಮಸ್ವಾಮಿಯೇ? ಲಿಲ್ಲಿಯವರೇ? —ಎಂಬುದನ್ನು ನಿಷ್ಕರ್ಷಿಸುವುದು ಕಷ್ಟವಾಗುತ್ತಿತ್ತು. ಶ್ರೀಕಂಠಯ್ಯನವರೂ ಸಿದ್ದನೂ ಇದರಲ್ಲಿ ವಹಿಸಿದ್ದ ಭಾಗ ಅವರಿಗೆ ಗೊತ್ತಿರಲಿಲ್ಲವಾದ್ದರಿಂದ ತೊಡಕು ಕಡಮೆಯಾಗಿತ್ತು: ಇಂಥವರದೇ ಸಹಾಯವೆಂದು ಹೇಳಲು ಸಾಧ್ಯವೇ? ಯಾರಿಗೆ ಯಾರು ಸಹಾಯ?



ಮುದ್ರಣವಾದುದು : ನ್ಯಾಷನಲ್ ಪ್ರೆಸ್, ಸಂತೇಪೇಟೆ, ತುಮಕೂರು

# ತಿದ್ದುಪಡಿ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೧. | ೧೮ | ಕುಳಿತುಕೂಳ್ಳುವಿ | ಕುಳಿತುಕೊಳ್ಳುವ |
| ೨೭ | ೮ | ವೆತ್ಯಾಸ | ವ್ಯತ್ಯಾಸ |
| ೨೯ | ೨ | ಅನುಕೂಲವಾಗಿದ್ದವು | ಅನುಕೂಲವಾಗಿದ್ದಿತು |
| ೨೯ | ೧೮ | ತಾಳಿರಣ್ಣ ವಿಳಾಸ | ತಾಳಿರಣ್ಣ ಎಂದು ಹೇಳಿ [ವಿಳಾಸ |
| ೩೨ | ೫ | ಹಸ್ತಪತ್ರಿಕೆ | ಹಸ್ತಪ್ರತಿ |
| ೪೧ | ೧೮ | ಆಗಬಹುದು | ಆಗಬಯದು |
| ೪೪ | ೧೩ | ಮಾಡುತ್ತಿದ್ದವು | ಮಾಡುತ್ತಿತ್ತು |
| ೪೫ | ೩ | ಯಧಾಶಕ್ತಿ | ಯಥಾಶಕ್ತಿ |
| ೪೫ | ೧೭ | ಮಜ್ಞ | ಮಗ್ನ |
| ೫೩ | ೧೯ | ಆಗಲೇ | ಆ ಗಾದೆ |
| ೭೨ | ೨ | ಶುದ್ಧ ಬಿದಿಗೆ | ಬಹುಳ ಬಿದಿಗೆ |
| ೭೩ | ೪ | ದುಖಿಃ | ದುಃಖಿ |
| ೭೩ | ೨೭ | ಆವರ | ಅವರ |
| ೮೭ | ೧ | ಜಾಗರೂಕತೆ | ಜಾಣತನ |
| ೧೦೭ | ೧೭ | ನೀನು | ನಾನು |
| ೧೧೧ | ೧೭ | ನಿನಗಿಂತ | ನನಗಿಂತ |
| ೧೩೫ | ೧೨ | ವಿಫಲ | ಸಫಲ |

ವಿ.ಸೂ:—೧. ಟಾನಸ್ಲೇಯವರು ದ ಕಾರಕ್ಕೆ ಡ ಕಾರ ಉಪಯೋಗಿಸುವವರು. ಮುದ್ರಣದಲ್ಲಿ ಕೆಲವೆಡೆಗಳಲ್ಲಿ ಡ ಕಾರಕ್ಕೆ ದ ಕಾರವೇ ಬಿದ್ದಿದೆ. ಅವುಗಳನ್ನು ತಿದ್ದಿಕೊಳ್ಳಬೇಕಾಗಿ ವಿನಂತಿ.

೨. ಅಲ್ಪ ವಿರಾಮ, ಪೂರ್ಣವಿರಾಮ, ಪ್ರಶ್ನಾರ್ಥಕಚಿಹ್ನೆ ಮೊದಲಾದವುಗಳ ಉಪಯೋಗದಲ್ಲಿನ ಅಚಾತುರ್ಯವನ್ನು ಇಲ್ಲಿ ತೋರಿಸುವ ಪ್ರಯತ್ನ ಮಾಡಿಲ್ಲ. ಪುಸ್ತಕಕ್ಕೆ ಪುನರ್ಮುದ್ರಣದ ಅವಕಾಶ ದೊರೆತರೆ ... ವನ್ನು ಈ ಎಲ್ಲ ತಪ್ಪುಗಳನ್ನೂ ಸರಿಪಡಿಸಿಕೊಳ್ಳಲು ಕೃತಜ್ಞತೆ... ಉಪಯೋಗಿಸಿಕೊಳ್ಳಲಾಗುವುದು.